# ಜೈಲಿನ ದಿನಚರಿ

— ಸ್ನೇಹಲತಾ ರೆಡ್ಡಿ

What do you achieve by all these unnecessary harassments-? It only lowers your prestige Its a question of deep shame- and nothing else- Harassing a woman must only bring you a perverse satisfaction nots you gain nothing- If you think you can break my spirit - I'm afraid you are wrong, these acts ~~of yours~~ only make me firmer in my beliefs of truth humanity and freedom of individuals.

My body may suffer ~~hardships~~ humiliations but my spirit the human spirit cannot be suppressed for long —

ಮಾನವ ಹಕ್ಕು ರಕ್ಷಣಾ ಸಮಿತಿ
ಕರ್ನಾಟಕ

# ಜೈಲಿನ ದಿನಚರಿ

ಸ್ನೇಹಲತಾ ರೆಡ್ಡಿ

ಮಾನವ ಹಕ್ಕು ರಕ್ಷಣಾ ಸಮಿತಿ
ಕರ್ನಾಟಕ

*A PRISON DIARY* by Snehalata Reddy: Extracts from her diary Published by Dr. U. R. Anantha Murthy for Human Rights Committee, Karnataka State, 7th Main, Saraswathipuram, Mysore-570009. Translated from the Original English into Kannada by T. R. Mohan.

First Published 1977

Re : 1

Printed at ILA Printers
153, 4th Main, 8th Cross, Chamarajpet,
Bangalore-560 018.

# ಜೈಲಿನ ದಿನಚರಿ

**1976**ನೇ ಮೇ ಒಂದರಂದು ಶ್ರೀಮತಿ ಸ್ನೇಹಲತಾರೆಡ್ಡಿಯವರನ್ನು ರಾಜಕೀಯ ಕಾರಣಗಳಿಗಾಗಿ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಬಂಧಿಸಿಡಲಾಯಿತು. ಬಂಧನದ ಕಾರಣಗಳನ್ನು ಸ್ಪಷ್ಟಪಡಿಸಿರಲಿಲ್ಲ. ಅಷ್ಟೆ ಅಲ್ಲ, ಅದರ ಬಗ್ಗೆ ಅಧಿಕಾರಿಗಳನ್ನು ಕೇಳಿದರೆ ಉತ್ತರವೂ ಸಿಗುತ್ತಿರಲಿಲ್ಲ.

ಚಲನಚಿತ್ರ ಪ್ರೇಮಿಗಳಿಗೆ ಸ್ನೇಹಲತಾರೆಡ್ಡಿಯವರು, ಹಲವಾರು ರಾಷ್ಟ್ರೀಯ ಹಾಗು ಅಂತರ ರಾಷ್ಟ್ರೀಯ ಪ್ರಶಸ್ತಿಗಳನ್ನು ಪಡೆದ 'ಸಂಸ್ಕಾರ' (ಅವರ ಪತಿ ಶ್ರೀ ಪಟ್ಟಾಭಿರಾಮರೆಡ್ಡಿಯವರೇ ಅದರ ನಿರ್ಮಾಪಕರು ಹಾಗೂ ನಿರ್ದೇಶಕರು) ಚಿತ್ರದ ನಾಯಕಿಯಾಗಿ ಚಿರ ಪರಿಚಿತರು. ಅವರು ಬೆಂಗಳೂರಿನ ರಂಗಭೂಮಿ ಮತ್ತು ಕಲಾ ಪ್ರಪಂಚದ ಮುಖ್ಯ ವ್ಯಕ್ತಿ ಕೂಡಾ ಆಗಿದ್ದರು. ಇವೆಲ್ಲಕ್ಕಿಂತ ಮಿಗಿಲಾಗಿ ಜೀವನದ ವಿವಿಧ ಕ್ಷೇತ್ರಗಳ ಜನರಿಗೆ, ಸಮಾಜವಾದೀ ನಾಯಕರಿಗೆ, ಬರಹಗಾರರಿಗೆ, ಚಿತ್ರಕಲಾವಿದರಿಗೆ, ಸಂಗೀತಗಾರರಿಗೆ ಮತ್ತು ಬದುಕಿನ ಅರ್ಥ ಮತ್ತು ಉದ್ದೇಶಗಳ ಅನ್ವೇಷಣೆಯಲ್ಲಿ ತೊಡಗಿದ್ದ ಯುವಕರಿಗೆ ಅವರು ಪರಮ ಮಿತ್ರರಾಗಿದ್ದರು. ಸರಳ ಮತ್ತು ಸುಂದರವಾದ ಅವರ ಮನೆಯ ಡ್ರಾಯಿಂಗ್ ರೂಮಿನಲ್ಲಿ ಸ್ನೇಹಲತಾರನ್ನು ಕಾಣಬಹುದಾಗಿತ್ತು. ಅವರದು ತುಂಬಾ ದೃಢ ಹಾಗೂ ಆಕರ್ಷಕ ವ್ಯಕ್ತಿತ್ವ. ಅನ್ಯಾಯ, ಅಸಮಾನತೆ ಮತ್ತು ವಕ್ರತೆಯ ವಿರುದ್ಧ ಸಿಡಿದೇಳುವ ಪ್ರವೃತ್ತಿ. ಸ್ನೇಹಿತರಿಗೆ ಅವರ ಮನೆಯ ಬಾಗಿಲು ಸದಾ ತೆರೆದಿರುತ್ತಿತ್ತು.

ಅವರ ಸ್ನೇಹಪರತೆ ಮತ್ತು ಆತ್ಮೀಯತೆಯೇ ಜೈಲುವಾಸ ಅನುಭವಿಸಲು ಕಾರಣವಾದವು. ಹಲವಾರು ವರ್ಷಗಳಿಂದ ಸಮಾಜವಾದಿ ಪಕ್ಷದ ನಾಯಕ ಜಾರ್ಜ್ ಫರ್ನಾಂಡಿಸ್ಸರ ಆತ್ಮೀಯ ಸ್ನೇಹಿತೆಯಾಗಿದ್ದರು.

ಆದರೆ ಬದಲಾದ ರಾಷ್ಟ್ರೀಯ ವಾತಾವರಣದಲ್ಲಿ ಜಾರ್ಜ್‌ಫರ್ನಾಂಡಿಸ್ಸರ ಸ್ನೇಹಿತೆಯೆಂಬ ಕಾರಣವೊಂದೇ ಸ್ನೇಹಲತಾರವರನ್ನು ಜೈಲಿಗೆ ಕಳಿಸಲು, ನಂತರ

ದುರಂತಮಯ ಪರಿಣಾಮಗಳನ್ನು ಎದುರಿಸುವಂತೆ ಮಾಡಲು ಸಾಕಾಯಿತು. ರಾತ್ರಿ ಬೆಳಗಾಗುವುದರಲ್ಲಿ ಸ್ನೇಹಲತಾರ ಸುಂದರ ವಿಶ್ವ ಕುಸಿದು ಬಿದ್ದಿತು. ದುಃಸ್ವಪ್ನ ಮಯವಾದ ಅನಿಶ್ಚಿತತೆಯ ಬದುಕು ಪ್ರಾರಂಭವಾಯಿತು. ಅವರ ಮಗಳು ನಂದನಾ ಳನ್ನು ಎರಡುಸಾರಿ ತನಿಖೆಗಾಗಿ ಕರೆದೊಯ್ಯಲಾಯಿತು. ಅವರ ಕುಟುಂಬದ ಮೇಲೆ ಸದಾ ನಿಗಾ ಇಡಲಾಯಿತು. ಏಪ್ರಿಲ್ 27ರಂದು, ಹೊಸ ಚಲನ ಚಿತ್ರ ತಯಾರಿಕೆಯ ಸನ್ನಾಹದಲ್ಲಿದ್ದ ರೆಡ್ಡಿ ಕುಟುಂಬದವರು ಚಿತ್ರೀಕರಣಕ್ಕೆ ಬೇಕಾದ ದೀಪೋಪಕರಣಗಳ ವ್ಯವಸ್ಥೆಗಾಗಿ ಮದ್ರಾಸಿಗೆ ಹೊರಡುವ ತಯಾರಿಯಲ್ಲಿದ್ದರು. 4 ಗಂಟೆಯ ಹೊತ್ತಿಗೆ ಮನೆಗೆ ಹಿಂದಿರುಗುತ್ತಿದ್ದ ನಂದನಾಳನ್ನು ಮೂರನೆಯ ಸಾರಿ ತನಿಖೆಗಾಗಿ ಪೋಲೀಸ್ ಠಾಣೆಗೆ ಕರೆದೊಯ್ದರು. ಸಂಜೆ 7 ಗಂಟೆಗೆ ನಂದನಾಳನ್ನು ಠಾಣೆಯಿಂದ ಬಿಟ್ಟರು. ಅವಳನ್ನು ತನಿಖೆಗಾಗಿ ಕರೆದುಕೊಂಡು ಹೋದ ವಿಚಾರವನ್ನು ಕುಟುಂಬದ ಯಾರಿಗೂ ತಿಳಿಸಿರಲಿಲ್ಲ. ಕುಟುಂಬದವರು ಕಳವಳದಲ್ಲಿ ಕಾದಿದ್ದರು. ನಂದನಾ ಇದ್ದಕ್ಕಿದ್ದಂತೆ ನಾಪತ್ತೆಯಾಗಿದ್ದುದು ಅವರ ಕಾರ್ಯಕ್ರಮವನ್ನು ಅಸ್ತವ್ಯಸ್ತಗೊಳಿಸಿತ್ತು. ಅವರಿಗೆ ಏನು ಮಾಡಬೇಕೆಂದೂ ತೋಚಲಿಲ್ಲ. ಅಂತೂ ರಾತ್ರಿ ಒಂಬತ್ತು ಗಂಟೆಗೆ ತಮ್ಮ ಮಗ ಕೊನಾರಕ್‌ನನ್ನು ಮನೆಯಲ್ಲಿರಲು ಬಿಟ್ಟು ತಾವು ಮದ್ರಾಸಿಗೆ ಪ್ರಯಾಣ ಮಾಡಿದರು.

ಮಧ್ಯರಾತ್ರಿಯಲ್ಲಿ ಯಾರೋ ಮನೆ ಬಾಗಿಲು ಬಡಿದು 'ಟೆಲಿಗ್ರಾಂ' ಎಂದು ಕೂಗಿದರು. ಬಾಗಿಲು ತೆರೆದ ಕೊನಾರಕ್‌ನನ್ನು ಯಾರೋ ತಮ್ಮ ಬಾಹುಗಳಲ್ಲಿ ಬಂಧಿಸಿದರು. ಒಂದು ಹಿಂಡು ಪೋಲಿಸರು ಮನೆಯೊಳಗೆ ನುಗ್ಗಿದರು. ಮನೆಯ ಇತರರೆಲ್ಲ ಮದ್ರಾಸಿಗೆ ಹೋಗಿದ್ದಾರೆಂದು ಗೊತ್ತಾದಾಗ ಕೊನಾರಕ್‌ನನ್ನು ಅವನ ಅರೆಬರೆ ಬಟ್ಟೆಯಲ್ಲಿಯೇ ಹೈಗ್ರೌಂಡ್ಸ್ ಪೋಲಿಸ್ ಠಾಣೆಗೆ ಎಳೆದು ಕೊಂಡುಹೋದರು. ಬಂದಿದ್ದವರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಮನೆಯಲ್ಲಿ ತಪಾಸಣೆಗೆಂದು ಉಳಿದರು. 84 ವರ್ಷ ವಯಸ್ಸಿನ ಸ್ನೇಹಲತಾರ ತಂದೆ ಮತ್ತು ಸೇವಕರನ್ನು ಕೊನೆಯಿಲ್ಲದಷ್ಟು ಪ್ರಶ್ನೆ ಕೇಳಿದರು. ಬೆಳಗ್ಗೆ 6 ಗಂಟೆಗೆ ಮನೆಬಿಟ್ಟು ಹೊರಟರು.

ಮಾರನೇ ದಿನ ಬೆಳಗ್ಗೆ ಮದ್ರಾಸಿನಲ್ಲಿ ರೆಡ್ಡಿ ಕುಟುಂಬದವರಿಗೆ ತಿಳಿದ ಮೊದಲ ಸುದ್ದಿಯೆಂದರೆ ಅವರ ಬಹುಕಾಲದ ಸ್ನೇಹಿತ ಶ್ರೀ ಎಂ. ಎಸ್. ಅಪ್ಪಾರಾವ್ ಮತ್ತು ಅವರ ಮಗಳನ್ನು ಬೆಳಗ್ಗೆ ಮುಂಚೆ ಬಂಧಿಸಿದ್ದಾರೆಂಬುದು. ಅವರು ತಕ್ಷಣವೇ ಬೆಂಗಳೂರಿಗೆ ಫೋನ್ ಮಾಡಲು ಪ್ರಯತ್ನಿಸಿದರು. ಆದರೆ ಫೋನ್ ನಿಶ್ಶಬ್ದವಾಗಿತ್ತು. ಆಕಸ್ಮಿಕವಾಗಿ ತಮ್ಮ ಪಕ್ಕದ ಮನೆಯವರನ್ನು ಸಂಪರ್ಕಿಸಿದಾಗ ತಮ್ಮ ಮನೆಯಲ್ಲಿ ಕಳೆದ ರಾತ್ರಿ ನಡೆದ ಘಟನೆ, ಕೊನಾರಕ್ ಪೋಲಿಸ್ ಸ್ಟೇಷನ್

ನಿಂದ ವಾಪಸು ಬರದಿರುವುದು, ತಮ್ಮ ಫೋನನ್ನು ಕಾನೂನು ಬಾಹಿರವಾಗಿ ನಿರುಪ ಯುಕ್ತ ಗೊಳಿಸಿರುವುದು ತಿಳಿದು ಬಂತು. ತಕ್ಷಣವೇ ಬೆಂಗಳೂರಿಗೆ ವಾಪಸು ಹೋಗಲು ನಿರ್ಧರಿಸಿ ಹೋಟೆಲ್ಲಿಗೆ ಸಾಮಾನು ಸರಂಜಾಮುಗಳನ್ನು ತೆಗೆದುಕೊಳ್ಳಲು ಬಂದರು. ಹೋಟೆಲ್ ಬಳಿ ಆಗಲೇ ಪೋಲಿಸರು ಒಂದು ಕಾರಿನೊಡನೆ ಸಿದ್ಧವಾಗಿ ನಿಂತಿದ್ದರು. ಬೆಂಗಳೂರಿಗೆ ಪೋಲಿಸ್ ಕಾವಲಿನಲ್ಲಿ ವಾಪಸು ಬಂದರು.

ಬೆಂಗಳೂರನ್ನು ತಲುಪಿದ ಕೂಡಲೇ ಅವರನ್ನು ಕಾರ್ಲಟನ್ ಹೌಸಿಗೆ ಕರೆದೊಯ್ಯ ಲಾಯಿತು. ಅಲ್ಲಿಯೇ ಸ್ನೇಹ ಮತ್ತು ಪಟ್ಟಾಭಿಯವರನ್ನು ತನಿಖೆಗಾಗಿ ಸ್ಥಾನ ಬದ್ಧತೆ ಯಲ್ಲಿಡಲಾಯಿತು. ಉಳಿದವರನ್ನು ಮನೆಗೆ ಕಳಿಸಿದರು. ಕೊನಾರಕ್ ಎಲ್ಲಿದ್ದಾನೆ ನ್ನುವುದು ಇನ್ನೂ ಗೊತ್ತಾಗಿರಲಿಲ್ಲ. ಸ್ನೇಹ ಮತ್ತು ಪಟ್ಟಾಭಿ ಕಳೆದ ರಾತ್ರಿಯ ಮದ್ರಾಸ್ ಪ್ರಯಾಣದಿಂದ, ಮಾರನೇದಿನ ಬೆಳಿಗ್ಗೆಯೇ ಬೆಂಗಳೂರಿಗೆ ವಾಪಸು ಪ್ರಯಾಣದಿಂದ ತುಂಬಾ ಬಳಲಿದ್ದರು. ರಾತ್ರಿಯಿಡೀ ಒಂದು ಕೊಠಡಿಯಲ್ಲಿ ಇಬ್ಬ ರನ್ನೂ ಕೂರಿಸಿಯೇ ಇದ್ದರು. ಅಲ್ಲಿಯೇ ಇದ್ದ ಗಾರ್ಡನ್ನು ಕೇಳಿದರೆ 'ಸಾಹೇಬ್ರು ಬರ್ತಾರೆ' ಅನ್ನೋದು ಮಾತ್ರ ಉತ್ತರ. ಆ ರಾತ್ರಿ ಯಾರೂ ಬರಲಿಲ್ಲ. ಆದರೆ ಪರಿಣಾಮಕಾರಿಯಾಗಿ ಬಂದಿಗಳಿಗೆ ನಿದ್ರೆಯಿಲ್ಲದಂತೆ ಮಾಡಿ, ಅವರನ್ನು ಬಳಲಿಸಿ ಉದ್ವಿಗ್ನತೆಯನ್ನು ಹುಟ್ಟಿಸಿದರು. ಕೊನಾರಕ್ ಬಗ್ಗೆ ಯಾವ ಮಾಹಿತಿಯನ್ನೂ ಕೊಡ ಲಿಲ್ಲ. ಸಂಜೆಯ ಹೊತ್ತಿಗೆ ಸ್ನೇಹಲತಾ ತನ್ನ ಮಗನ ಬಗ್ಗೆ ಕಳವಳ, ಚಿಂತೆಯಲ್ಲಿ ಹುಚ್ಚಾಗಿದ್ದರು.

ನಂತರ ಪಟ್ಟಾಭಿ ಮತ್ತು ಸ್ನೇಹ ಅವರನ್ನು ಪ್ರತ್ಯೇಕ ಕೊಠಡಿಗಳಿಗೆ ತನಿಖೆ ಗಾಗಿ ಕರೆದೊಯ್ಯಲಾಯಿತು. ಕಳವಳದಲ್ಲಿ, ಬೇಗುದಿಯಲ್ಲಿ ಬೇಯಿಸುವ ವಿಧಾನ- ಉದ್ದೇಶಪೂರ್ವಕವಾಗಿಯೋ ಅಥವಾ ಆಕಸ್ಮಿಕವಾಗಿಯೋ- ಫಲಕೊಟ್ಟಿತು. ಪೋಲಿಸ ರು ಬಾಯಿ ಬಿಡುವ ಮೊದಲೇ ಅಥವಾ ಒಂದು ಪ್ರಶ್ನೆ ಕೇಳುವ ಮೊದಲೇ ಸ್ನೇಹ ಲತಾ ತಾನೇ ಹೇಳಿದರು, "ನನ್ನ ಮಗನನ್ನು ಕರಕೊಂಡು ಬನ್ನಿ, ನನ್ನ ಗಂಡನನ್ನು ಬಿಡುಗಡೆ ಮಾಡಿ, ನನ್ನ ಮಗಳನ್ನು ಹಿಂಸಿಸೋದಿಲ್ಲಾಂತ ಭರವಸೆ ಕೊಡಿ, ನನಗೆ ಗೊತ್ತಿರೋದೆಲ್ಲಾ ಹೇಳ್ತೀನಿ." ಇದುವರೆಗೂ ರೆಡ್ಡಿಯವರ ವಿರುದ್ಧ ಮಾಡುವು ದಕ್ಕೆ ಯಾವ ಆಪಾದನೆಯೂ ಇರಲಿಲ್ಲ– ರಾಜಕೀಯ ಅಪರಾಧಿಗಳು ಇವರೊಡನೆ ನಿಕಟ ಸಂಬಂಧ ಹೊಂದಿದವರು ಅನ್ನೋದೊಂದನ್ನು ಬಿಟ್ಟರೆ. ಆದರೆ ಆಗ ತಾನೇ ಹೆಜ್ಜೆಯಿಟ್ಟಿದ್ದ ಹೊಸ ಪ್ರಪಂಚವೊಂದರಲ್ಲಿ ಸ್ನೇಹಲತಾ ಮುಗ್ಧರಾಗಿದ್ದರು. ಬಳಲಿದ, ಉದ್ವಿಗ್ನರಾದ, ಮಗನ ಬಗ್ಗೆ ಕಳವಳ ಗೊಂಡ ಸ್ನೇಹಲತಾ ತಮ್ಮ ಹೇಳಿಕೆಯಿಂದ ಪೋಲಿಸರಲ್ಲಿ ಸಂಶಯ ಹುಟ್ಟಿಸಿ ಮಹಾಪರಾಧ ಮಾಡಿದರು.

ತಕ್ಷಣವೇ ಅವರ ಇಡೀ ಕುಟುಂಬವನ್ನು ಸ್ನೇಹಲತಾರವರ ಕೊಠಡಿಗೆ ಕರೆದು ಕೊಂಡು ಬಂದು ಅವರೆಲ್ಲ ಕ್ಷೇಮವಾಗಿದ್ದಾರೆಂದು ತೋರಿಸಲಾಯಿತು. ಸ್ನೇಹಲತಾ ರವರನ್ನು ತನಿಖೆಗಾಗಿ ಅಲ್ಲಿಯೇ ಇರಿಸಿಕೊಂಡು ಉಳಿದವರನ್ನು ಮನೆಗೆ ವಾಪಸು ಕಳಿಸಲಾಯಿತು. ಮುಂದಿನ ವಾರ ತುಂಬಾ ಆಶಾಪೂರ್ಣವಾಗಿಯೇ ಕಂಡಿತು. ಸ್ನೇಹಲತಾರವರನ್ನು ಪದೇ ಪದೇ ತನಿಖೆಗೆ ಒಳಪಡಿಸಲಾಯಿತು. ಆದರೆ ಅವರಿಗೆ ಹೇಳಲು ಏನೂ ಇರಲಿಲ್ಲ. ಸ್ನೇಹಲತಾರವರಿಗೆ ಹಾಸಿಗೆ, ಬಟ್ಟೆ ಮತ್ತು ಊಟವನ್ನು ಮನೆಯಿಂದ ತಂದುಕೊಡಲು ಅನುಮತಿ ಕೊಡಲಾಯಿತು. ಅವರನ್ನು ರಾಜಕೀಯ ಬಂದಿಯಾಗಿ ಕಾರ್ಲ್ಟನ್ ಹೌಸ್‌ನಲ್ಲಿ ಇರಿಸಲಾಯಿತು. ಕುಟುಂಬದವರ, ಬಂಧು ಬಾಂಧವರ ಸಂದರ್ಶನಕ್ಕೆ ಅವಕಾಶ ಕಲ್ಪಿಸಲಾಯಿತು. ಒಂದು ಕಾಲದಲ್ಲಿ ಉಪ ಕುಲಪತಿಗಳ ನಿವಾಸವಾಗಿದ್ದ ಕಾರ್ಲ್ಟನ್ ಹೌಸಿನ ಭವ್ಯವಾದ ಹುಲ್ಲಿನ ಮೇಲೆ ಪ್ರತಿ ಸಂಜೆ ಸ್ನೇಹಲತಾ ತನ್ನ ಮನೆಯೇ ಎಂಬಂತೆ ಬಂದ ಅತಿಥಿಗಳನ್ನು ಸತ್ಕರಿಸುತ್ತಿದ್ದರು.

ಮೇ 7 ರ ವರೆಗೆ ಎಲ್ಲವೂ ಚೆನ್ನಾಗಿತ್ತು. ಅಂದು ಪಟ್ಟಾಭಿ ಮತ್ತು ವಿದ್ಯಾ ಆಕೆಯ ಊಟವನ್ನು ತಂದಾಗ ಮನೆ ಜನರಹಿತವಾಗಿತ್ತು, ಬೀಗ ಕೂಡ ಹಾಕಿತ್ತು. ಬಹುಶಃ ತನಿಖೆಗಾಗಿ ಬೇರೆಡೆಗೆ ಆಕೆಯನ್ನು ಕರೆದುಕೊಂಡು ಹೋಗಿರಬಹುದೆಂದು ಭಾವಿಸಿದ ಅವರಿಬ್ಬರೂ ಅಲ್ಲೇ ಕಾದಿದ್ದರು. ರಾತ್ರಿ 10–30 ರ ವರೆಗೆ ಕಾದು ನಿರಾಶರಾಗಿ ಮನೆಗೆ ಹಿಂದಿರುಗಿದರು. ಮತ್ತೆ ಮಧ್ಯರಾತ್ರಿಯ ಹೊತ್ತಿಗೆ ಕಾರ್ಲ್ಟನ್ ಹೌಸಿಗೆ ವಾಪಸು ಹೋದರು. ಯಾರೂ ಇರಲಿಲ್ಲ. ಮನೆಗೆ ವಾಪಸು ಬಂದು ಲೆಖ್ಖವಿಲ್ಲದಷ್ಟು ಫೋನ್ ಕಾಲ್‌ಗಳನ್ನು ಮಾಡಿದರೂ ಸ್ನೇಹಲತಾ ಎಲ್ಲಿದ್ದಾರೆ ಎನ್ನು ವುದು ತಿಳಿಯಲಿಲ್ಲ. ಮಾರನೇ ದಿನ ಬೆಳಿಗ್ಗೆ ದಯಾಪೂರ್ಣವಾದ ಆದರೆ ಅಪರಿಚಿತ ವಾದ ದನಿಯೊಂದು 'ಸ್ನೇಹಳನ್ನು ಜೈಲಿಗೆ ಹಾಕಿರಬೇಕೆಂದು ನನಗೆ ಅನುಮಾನವಿದೆ' ಎಂದು ಫೋನಿನಲ್ಲಿ ತಿಳಿಸಿತು.

ಈ ಮಧ್ಯೆ ಸ್ನೇಹಲತಾಗೇನಾಯಿತು? ಮೊದಲ ಸಾರಿ ಆಕೆಯನ್ನು ಮೋಸ ಮಾಡಿ ಬಂಧಿಸಿದಂತೆಯೇ ಈ ಸಾರಿಯೂ ಆಕೆಯನ್ನು ಅವರ ಬಂಧುಗಳಿಗೆ ತಿಳಿಯ ದಂತೆ ಜೈಲಿಗೆ ನೂಕಿದ್ದರು. ಆ ದಿನ ಮಧ್ಯಾನ್ಹ 'ನಿಮ್ಮನ್ನು ಮನೆಗೆ ಕಳಿಸುತ್ತೇವೆ, ಸಾಮಾನೆಲ್ಲ ಪ್ಯಾಕ್ ಮಾಡಿಕೊಳ್ಳಿ' ಎಂದು ತಿಳಿಸಲಾಯಿತು. ಅಲ್ಲಿಂದ ಕೋರ್ಟಿಗೆ ಕರೆದೊಯ್ದರು. ಸ್ನೇಹಲತಾಗೆ ಕೋರ್ಟಿನ ನಡಾವಳಿಗಳು ಸಾಧಾರಣವಾಗಿ ಕಂಡವು. ಆದರೆ ನ್ಯಾಯಾಧೀಶರು, 'ನಿಮ್ಮನ್ನು ಜೈಲು ವಾಸಕ್ಕೆ ಹಾಕಲಾಗಿದೆ' ಎಂದಾಗ ಆಕೆಗೆ ಆಶ್ಚರ್ಯವಾಯಿತು. ಪಕ್ಕದಲ್ಲಿದ್ದ ಪೋಲಿಸ್ ಅಧಿಕಾರಿಗಳು, 'ಅದಕ್ಕೆಲ್ಲ ಯೋಚಿಸಬೇಡಿ, ಸುಮ್ಮನೆ ಫಾರ್ಮ್ಯಾಲಿಟಿ ಅಷ್ಟೆ' ಎಂದು ಸಮಾಧಾನಪಡಿಸಿದರು.

ನಿಮ್ಮ ಕುಟುಂಬದವರು ಜಾಮೀನಿಗೆ ಹಣ ತಂದ ತಕ್ಷಣ ನಿಮ್ಮ ಬಿಡುಗಡೆಯಾಗುತ್ತದೆ ಎಂದು ನ್ಯಾಯಾಧೀಶರು ತಿಳಿಸಿದರು. ಸ್ನೇಹಲತಾ ಅಲ್ಲೇ ಇದ್ದ ಪೋಲಿಸೊಬ್ಬನ ಕೈಲಿ ತನ್ನ ಮನೆಗೆ ಫೋನ್ ಮಾಡಿ ತಾನೆಲ್ಲಿದ್ದೇನೆ ಅನ್ನುವ ವಿಚಾರ ತಿಳಿಸಲು ಹೇಳಿದರು. ಅವನು ಫೋನ್ ಬಳಿಗೆ ಹೋಗಿ ಫೋನ್ ಮಾಡುವವನಂತೆ ನಟಿಸಿದ, ಆದರೆ ವಾಸ್ತವವಾಗಿ ಫೋನ್ ಮಾಡಿರಲಿಲ್ಲ. ಮಾರನೇ ದಿನ ಬೆಳಗಿನವರೆಗೆ ಮನೆಯವರಿಗೆ ಸ್ನೇಹಲತಾರ ಬಗ್ಗೆ ಏನೂ ತಿಳಿದಿರಲಿಲ್ಲ.

ಈ ಮಧ್ಯೆ ಆಕೆಯನ್ನು ಜೈಲಿಗೆ ಹಾಕಲು ಬೇಕಾದ ಕಾಗದಗಳಿಗೆ ಸಹಿ ಹಾಕಿಯಾಗಿತ್ತು. ಆಜ್ಞೆ ಕೊಟ್ಟಾಗಿತ್ತು. ಸ್ನೇಹಲತಾರವರನ್ನು ಕಾರ್ಲ್ಟನ್ ಹೌಸಿಗೆಂದು ವಾಪಸು ಕರೆದುಕೊಂಡು ಹೋದರು. ಆಗಲೇ ಸಂಜೆಯಾಗಿತ್ತು. ಮುಸ್ಸಂಜೆಯ ಮಂಕಿನಲ್ಲಿ ಸ್ನೇಹಳನ್ನು ಕತ್ತಲ, ಗಂಭೀರವಾದ, ಕಲ್ಲುಗೋಡೆಗಳ ಬೆಂಗಳೂರು ಸೆಂಟ್ರಲ್ ಜೈಲಿಗೆ ಕರೆದೊಯ್ಯಲಾಯಿತು.

ಅಲ್ಲಿಗೆ ಕಾಲಿಟ್ಟದ್ದೇ ತಡ ಅಪಮಾನಕರವಾದ ಅನುಭವಗಳ ಸರಣಿಯೇ ಪ್ರಾರಂಭವಾಯಿತು. ಅವರ ಸಾಮಾನು ಸರಂಜಾಮುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಲಾಯಿತು. ಆಕೆಯ ಸಹಿ ಮತ್ತು ಹೆಬ್ಬೆರಳ ಗುರುತುಗಳನ್ನು ಖೈದಿಗಳ ಪುಸ್ತಕದಲ್ಲಿ ತೆಗೆದುಕೊಳ್ಳಲಾಯಿತು. ಆಕೆಯನ್ನು ಬತ್ತಲು ಮಾಡಿ ಕೂಡ ಹುಡುಕಿಯಾಯಿತು. ಒಬ್ಬ ಮನುಷ್ಯ ಮಾತ್ರ ಹಿಡಿಸುವಷ್ಟು ಜಾಗವಿದ್ದ ಜೈಲಿನ ಕೋಣೆಯೊಂದರಲ್ಲಿ ಅವರನ್ನು ಕೂಡಿ ಹಾಕಲಾಯಿತು. ಕೋಣೆಯ ಒಂದು ಕಡೆ ಶೌಚಗೃಹದ ಬದಲು ಒಂದು ಕಂಡಿ, ಇನ್ನೊಂದು ಕಡೆ ಕಂಬಿಗಳ ಬಾಗಿಲು. ಅದೃಷ್ಟವಶಾತ್ ತನ್ನ ಹಾಸಿಗೆ ಬಟ್ಟೆಗಳು ಜೊತೆಗಿದ್ದುದರಿಂದ ಸ್ನೇಹಲತಾ ರಾತ್ರಿಯನ್ನು ಹೇಗೊ ಕಳೆದರು. ಆಕೆಯ ಭಯ ಮತ್ತು ಅಳಲು ತನ್ನ ಬಂಧುಗಳು ಬಿಡುಗಡೆಗಾಗಿ ಪ್ರಯತ್ನಿಸಲಿಲ್ಲವೆಂಬ ಅಸಮಾಧಾನದಲ್ಲಿ ಅಡಗಿ ಹೋಗಿತ್ತು. ಅವರು ಆಕೆಯ ಬಿಡುಗಡೆಗಾಗಿ ಮಾಡಿದ ಪ್ರಯತ್ನಗಳು ಆಕೆಗೆ ತಿಳಿದಿರಲಿಲ್ಲ. ಪೋಲಿಸ್ ಮಾಡಿದ ಫೋನ್‌ಕಾಲ್ ಕೂಡ ಒಂದು ನಾಟಕವೆನ್ನುವುದು ಆಕೆಗೆ ಗೊತ್ತಿರಲಿಲ್ಲ.

ಮಾರನೇ ದಿನ ಬೆಳಿಗ್ಗೆ ಕುಟುಂಬದವರು ಆಕೆಯನ್ನು ಜೈಲಿನಲ್ಲಿ ನೋಡಿದರು. ನಂತರ ಜಾಮೀನಿಗಾಗಿ ಮ್ಯಾಜಿಸ್ಟ್ರೇಟ್‌ರವರ ಮನೆಗೆ ಹೋದರು. ಜಾಮೀನಿಗೆ ಅರ್ಜಿಯನ್ನು ಲಾಯರ್ ಮೂಲಕ ಕ್ರಮಪ್ರಕಾರವಾಗಿ ಕೊಡಿಸಿದರೆ ಜಾಮೀನು ಖಂಡಿತಾ ಸಿಗುತ್ತದೆಂದು ಅವರು ಭರವಸೆ ಇತ್ತರು. ಆದರೆ ವಕೀಲರಿಗೆ ಜಾಮೀನು ಸಿಗುತ್ತದೆನ್ನುವುದರಲ್ಲಿ ನಂಬಿಕೆ ಇರಲಿಲ್ಲ, ಆದರೂ ಪ್ರಯತ್ನಿಸಿದರು. ಇದು ಜಾಮೀನು ಸಿಗುವ ಕೇಸಲ್ಲವೆಂದು ರಹಸ್ಯವಾಗಿ ವಕೀಲರಿಗೆ ತಿಳಿಸಲಾಯಿತು.

ಕ್ರಮ ಪ್ರಕಾರವಾಗಿ ಸ್ನೇಹಲತಾರವರಿಗೆ ಜೈಲುವಾಸದ ದೀಕ್ಷೆ ಕೊಡಲಾಯಿತು. ಇಂಡಿಯನ್ ಪೀನಲ್ ಕೋಡಿನ 120, 120ಎ ಕಾನೂನು ಅನ್ವಯ ಅವರ ಮೇಲೆ ಮೊಕದ್ದಮೆ ಹೂಡಲಾಯಿತು. ಅಂತಿಮವಾಗಿ ಆಕೆಯ ವಿರುದ್ಧ ಮಾಡಿದ ಯಾವ ಆಪಾದನೆಯನ್ನೂ ರುಜುವಾತು ಮಾಡಲಾಗದೆ ಸರ್ಕಾರ ಮೊಕದ್ದಮೆಯನ್ನು ಕೈಬಿಟ್ಟಿತು. ಆದರೆ ಸ್ನೇಹಲತಾರ ಜೈಲುವಾಸ ಕೊನೆಗೊಳ್ಳಲಿಲ್ಲ. ಈಗ ಅವರು ಮೀಸಾದನ್ವಯ ಖೈದಿಯಾದರು. ಅದರ ವಿರುದ್ಧ ಯಾರೂ ಚಕಾರವೆತ್ತುವಂತಿರಲಿಲ್ಲ.

ಕ್ರಮೇಣ ಜೈಲಿನ ವಾಸ್ತವಿಕತೆ ಸ್ನೇಹಲತಾರ ಮೇಲೆ ಗರಿಗೆದರತೊಡಗಿತು. ಮೀಸಾ ಬಂದಿಗಳಿಗೆ ದೊರಕಬೇಕಾದ ಸೌಕರ್ಯಗಳೊಂದೂ ಸ್ನೇಹಲತಾರವರಿಗಿಲ್ಲದೆ 'ಸಿ' ವರ್ಗದ (ಸೂಳೆಯರು, ಕಳ್ಳರು ಇತರರು) ಖೈದಿಗಳ ಜೊತೆ ಕಾಲ ತಳ್ಳಬೇಕಾಯಿತು. ಸ್ತ್ರೀ ಖೈದಿಯೊಬ್ಬಳು ಜೈಲಿನಲ್ಲಿ ಪುರುಷನೊಡನೆ ಯಾವುದೇ ಬಗೆಯ ಸಂಪರ್ಕ ಹೊಂದಿರಬಾರದೆಂಬ ಕಾನೂನುರೀತ್ಯ ಸ್ನೇಹಲತಾ ಉಳಿದ ಮೀಸಾ ಬಂದಿಗಳ ಜೊತೆಗಿರುವುದಿರಲಿ ಅವರನ್ನು ನೋಡಲು ಕೂಡ ಅವಕಾಶ ಕೊಡಲಿಲ್ಲ—ಏಕಾಕಿಯಾಗಿ ಕಾಲ ಕಳೆಯಬೇಕಾಯಿತು. ವಾರಕ್ಕೆರಡು ಸಾರಿ ಬಂಧುಗಳು ಆಕೆಯ ಜೊತೆ ಒಂದು ಗಂಟೆಯ ಕಾಲ ಇರಬಹುದಾಗಿತ್ತು. ಅದೂ, ಜೈಲಿನ ಮುಖ್ಯಾಧಿಕಾರಿಗೆ ಅಪ್ರಿಯವಾಗುವಂತೆ ನಡೆದುಕೊಳ್ಳದಿದ್ದರೆ. ಆತನಿಗೆ ಅಸಮಾಧಾನವಾದರೆ ಆ ಸಂದರ್ಶನಗಳಿಗೂ ಅನುಮತಿ ಸಿಗುತ್ತಿರಲಿಲ್ಲ. ಆಕೆಯಿದ್ದ ಚಿಕ್ಕ ಕೊಠಡಿಯ ಹೊರಗೇ 'ಸಿ' ವರ್ಗದ ಖೈದಿಗಳ ಕೈಲಿ ಅಕ್ಕಿ, ರಾಗಿ ಶುಚಿ ಮಾಡುವ ಕೆಲಸ ನಡೆಯುತ್ತಿತ್ತು. ಅಸ್ತಮಾ ರೋಗಿಯಾದ ಸ್ನೇಹಲತಾಗೆ ಇದರಿಂದ ರೋಗ ಉಲ್ಬಣವಾಗುವ ಸಾಧ್ಯತೆಯಿತ್ತು. ಹಾಗಾಗಿ ಸದಾ ಕಾಲವೂ ತನ್ನ ಕೊಠಡಿಯ ಕಿಟಕಿ ಬಾಗಿಲುಗಳನ್ನು ಹಾಕಿಕೊಂಡು ಒಳಗೇ ಬೇಯುವ ಕೆಲಸ ಸ್ನೇಹಲತಾರ ಪಾಲಿಗಾಯಿತು.

ಈ ಕತ್ತಲ ಗಳಿಗೆಗಳ ಜೈಲು ವಾಸದಲ್ಲಿ, ಮಾನವೀಯ ಸಂಬಂಧ, ಸಂಗವಿಲ್ಲದ ಸ್ನೇಹಲತಾ ತನ್ನ ಅನಿಸಿಕೆಗಳನ್ನೂ, ನೋವನ್ನೂ ಮತ್ತು ಭಾವನೆಗಳನ್ನೂ ಒಂದು ದಿನಚರಿಯಲ್ಲಿ ಗುರುತಿಸಿದ್ದಾರೆ.

# ದಿನಚರಿಯಿಂದ ಆಯ್ದ ಭಾಗಗಳು

ಜುಲೈ 22. 1976 ಅದೃಷ್ಟ ಪರೀಕ್ಷೆಯ ದಿನ! ನಿಜವಾಗಿಯೂ ಕಣ್ಣು ಗತ್ತಲೆ ಗಟ್ಟಿ ವಿಸ್ಮೃತಿ ಉಂಟಾಗಿತ್ತು. ನಿಮಿಷಗಳ ಮಾತ್ರ – ನಾಡಿ ಮಿಡಿತ ಸ್ತಬ್ಧವಾಗಿತ್ತು – ಹಲವುಸಾರಿ ಕಣ್ಣು ಗತ್ತಲೆ ಗಟ್ಟಿತು. ಆದರೆ ಏನೂ ಆಗಲಿಲ್ಲ.

ಜುಲೈ 23 ಅಸ್ವಸ್ಥತೆ– ನಿಶ್ಶಕ್ತತೆ–ದಿನವೆಲ್ಲಾ ಕಣ್ಣು ಗತ್ತಲೆಗಟ್ಟಬಂತು– ವಿಶೇಷವೇನಿಲ್ಲ.

ಜುಲೈ 24 ನಿಶ್ಶಕ್ತತೆ–ಒಂದೆರಡುಸಾರಿ ಕಣ್ಣು ಗತ್ತಲೆಕಟ್ಟಿತು–ಮಧ್ಯಾಹ್ನ ಮಾತ್ರ ಊಟ–ದಿನವೆಲ್ಲಾ ಉಬ್ಬಸ.

ಜುಲೈ 25 ಉದ್ದವಾದ ಒಂಟಿದಿನ – ಸಾವಿನ ದವಡೆಯಲ್ಲಿದ್ದೆ– ನಾನು ಈ ನರಕದಿಂದ ಹೊರಗೆ ಹೋಗಬೇಕು–ಒಂದೇ ಬಿಡುಗಡೆ ಇಲ್ಲವೇ ಪರೋಲ್–ಒಟ್ಟಿನಲ್ಲಿ ಇಲ್ಲಿಂದ ಹೊರ ಡಬೇಕು.

ಜುಲೈ 26 ರಾತ್ರಿ ನಿದ್ರೆಯೇ ಇಲ್ಲ– ತಲೆ ತಿರುಗು ಮತ್ತು ಬೆನ್ನು ನೋವು– ಅವರು ನನ್ನನ್ನು ವೈದ್ಯಕೀಯ ಪರೀಕ್ಷೆಗೆ ಒಳ ಪಡಿಸಿಲ್ಲ– ನನ್ನ ಬಗ್ಗೆ ಯಾರೂ ಗಮನ ಕೊಡುತ್ತಿಲ್ಲ. ನನ್ನ ಹೃದಯ ಮತ್ತು ರಕ್ತದ ಒತ್ತಡದ ಪರೀಕ್ಷೆ ನಡೆ ದಿಲ್ಲ– ಇದೆಲ್ಲ ಎಷ್ಟು ಭಯಂಕರವಾಗಿದೆ. ನಿನ್ನೆಯಿಂದ ಆಸ್ತಮಾ –ಇನ್ನೂ ಗಂಭೀರಸ್ಥಿತಿ ತಲುಪಿಲ್ಲ– ಮುಂದಿನ ವಾರ ಡಾಕ್ಟರ್ ಒಂದು ತಿಂಗಳ ರಜೆಯ ಮೇಲೆ ಹೋಗು ತ್ತಾರಂತೆ– ಆಗ ನನ್ನ ಗತಿಯೇನು? ಅನಾರೋಗ್ಯದ ನಿಮಿತ್ತ ನನಗೆ ಬಂಧ ವಿಮೋಚನೆಯಾಗಬಾರದೆ ? ಕೊನೇ ಪಕ್ಷ ಪರೋಲ್ ಸಿಗಬಾರದೆ ? ಇಲ್ಲಿನ ದುರ್ವ,

ನಕ್ಕೆ ಯಾರ ಹೆಚ್ಚು ಕಡಿಮೆ ಸತ್ತೇ ಹೋಗುತ್ತಿದ್ದೇನೆ– ನನ್ನನ್ನು ಅಸ್ತಮಾ ಇಷ್ಟು ಸೀರಿಯಸ್ಸಾಗಿ ಪದೇ ಪದೇ ಕಾಡಿಸುತ್ತಿರಲಿಲ್ಲ–ನನ್ನ ಪ್ರಕೃತಿ ಖಂಡಿತಾ ಇಲ್ಲಿ ಸುಧಾರಿಸೋದಿಲ್ಲ–ಇಂಜಕ್ಷನ್ ಇತ್ಯಾದಿಗಳಿಂದ ಕೂಡ ಮಾನಸಿಕ ಒತ್ತಡವೇ ಇದಕ್ಕೆ ಮುಖ್ಯ ಕಾರಣ– ಇಲ್ಲೇ ಇದ್ದರೆ ನನಗೆ ನರ ವೈಫಲ್ಯವಾಗುತ್ತೆ, ಈಗಾಗಲೇ ನರ ದೌರ್ಬಲ್ಯ ತಲೆದೋರಿದೆ. ನಾನು ಮನೆಗೆ ಹೋಗಬೇಕು- ನನ್ನ ಬಂಧು ಬಾಂಧವರ ನಡುವೆ ಇರಬೇಕು. ದಯವಿಟ್ಟು ನನ್ನನ್ನು ಈ ಜೈಲುವಾಸದಿಂದ ಮುಕ್ತಗೊಳಿಸಿ– ದಯವಿಟ್ಟು. ಕೆ. ಹೊರಟು ಹೋಗುವ ಮೊದಲು.

ಕೊನಾರಕ್ ಬಂದಿದ್ದ– ಆದರೆ ಸ್ವಲ್ಪ ಹೊತ್ತು ಮಾತ್ರ ಇದ್ದ– ಅರ್ಧ ಗಂಟೆ ಕೂಡ ಇರಲಿಲ್ಲ– ಓ...ನನಗಿನ್ನು ಖಂಡಿತಾ ಇಲ್ಲಿರೋದಕ್ಕೆ ಸಾಧ್ಯವಿಲ್ಲ. ದಯವಿಟ್ಟು ನನ್ನನ್ನು ಇಲ್ಲಿಂದ ಮೊದಲು ಹೊರಗೆ ಕಳಿಸಿ. ನನ್ನ ವಿರುದ್ಧ ಯಾವ ಕೇಸೂ ಇಲ್ಲವೆಂದು ಪೋಲಿಸ್ ಒಪ್ಪಿಕೊಂಡಿದ್ದಾರೆ. ನನ್ನ ಈ ದುಃಸ್ಥಿತಿಗೆ ಸಂಪೂರ್ಣವಾಗಿ ಜೈಲು ಅಧಿಕಾರಿಗಳೇ ಜವಾಬ್ದಾರರು–ನನ್ನ ಕಾಯಿಲೆಯ ಪ್ರಾರಂಭದಲ್ಲಿ ನನ್ನನ್ನು ಆಸ್ಪತ್ರೆಗೆ ಕಳಿಸಲಿಲ್ಲ–ನನಗೆ ಆಸ್ಪತ್ರೆಗೆಹೋಗೋದಕ್ಕೆ ಅವರು ಬಿಡದೇ ಇರೋದ್ರಿಂದ ನನಗೆ ಭಯವಾಗಿದೆ. ಕುಗ್ಗಿ ಹೋಗಿದ್ದೇನೆ– ಮೂರು ತಿಂಗಳ ಕಾಲ ಅಸ್ತಮಾದಿಂದ ಸತತವಾಗಿ ನರಳೋದು ತಮಾಷೆಯಲ್ಲ– ನಾನು ಹೆಚ್ಚು ಕಡಿಮೆ ಮೃತ್ಯು ಮುಖಿಯಾಗಿದ್ದೇನೆ. ಆದರೆ ಅದನ್ನು ಜೈಲು ಅಧಿಕಾರಿಗಳು ಮುಚ್ಚಿಡೋದಕ್ಕೆ ಪ್ರಯತ್ನಿಸುತ್ತಿದ್ದಾರೆ. ಅವರಿಗೆ ನಾಚಿಕೆ, ಅವಮಾನವಿಲ್ಲವೆ? ಅವರೆಲ್ಲ ಅಮಾನುಷರೇ ?

ಜುಲೈ 27

ಮುಂದಿನ ಬಾರಿ ನನಗೆ ಅಸ್ತಮಾ ಅಟ್ಯಾಕ್ ಆದಾಗ ಸಹಾಯಕ್ಕೆ ಯಾರನ್ನೂ ಕರೆಯೋದಿಲ್ಲ ಅಂತ ಡಾಕ್ಟರಿಗೆ ಸ್ಪಷ್ಟವಾಗಿ ತಿಳಿಸಿದ್ದೇನೆ–ನಾನು ಸತ್ತರೆ ಸಾಯಲಿ. ನನ್ನ ಸಾವು ಅವರ ತಲೆಯ ಮೇಲಿರಲಿ ! ಒಂದು ವ್ಯಕ್ತಿ ಸಾವಿನಂಚಿನಲ್ಲಿದ್ದರೂ ಅವರಿಗದು ಅಷ್ಟು ಗಾಬರಿ ಪಡುವ ವಿಚಾರವಲ್ಲ- ಅವರು ಮಾಡಿದ ಕರ್ಮ ಅವರೇ ಅನುಭವಿಸಲಿ.

ಜುಲೈ 28 ಬೆನ್ನಿನ ಎಡಭಾಗದಲ್ಲಿ ಮತ್ತು ಕುತ್ತಿಗೆಯ ಹತ್ತಿರ ನೋವು – ತುಂಬಾ ಉಬ್ಬಸ, ಬಳಲಿಕೆ–ಕಣ್ಣುಗತ್ತಲೆ– ನನ್ನ ಸ್ಥಿತಿಯೇನು ಅನ್ನೋದು ವೈದ್ಯಕೀಯ ಪರೀಕ್ಷೆ ನಡೆಸಿದರೆ ತಿಳಿಯುತ್ತಿತ್ತು. ನನಗೆ ವಿಪರೀತ ಕಣ್ಣುಗತ್ತಲೆ ಬರುತ್ತದೆ-ತ್ಯಕ್ತಳಾಗಿದ್ದೇನೆ- ಅನೂಹ್ಯವಾಗಿ ವಿಪರೀತ ಬಳಲಿದ್ದೇನೆ- ನಿದ್ರೆ ಬರುತ್ತೆ–ತಕ್ಷಣವೇ ಮಲಗದಿದ್ದರೆ ಹೃದಯದ ಬಡಿತವೇ ನಿಂತು ಬಿಡುತ್ತದೊ ಅನಿಸುತ್ತದೆ.

ಮೃತ್ಯು ಇಷ್ಟು ಸರಳವೇ? ಇಷ್ಟು ಅರ್ಥ ಹೀನವೇ? ಒಂದು ಗಂಟೆಗಿಂತಲೂ ಹೆಚ್ಚು ಕಾಲದ ಯಾತನೆ ಮತ್ತು ಹಿಂಸೆ. ಉಸಿರಿಗಾಗಿ ಹೋರಾಟ. ಐದಾರು ಸಾರಿ ವಿಸ್ಮೃತಿ ನನಗೆ –ಕೊನೆಯಸಾರಿ ನಿಧಾನವಾಗಿ ಮೃದುವಾಗಿ.... ಒಂದು ಅಟ್ಯಾಕ್ ಮುಗಿದಾಗ ಇಂಜಕ್ಷನ್ ತಗೊಂಡು ಆಯಾಸವಾಗಿ ಹಾಸಿಗೆಗೊರಗುವಂತೆ–ಆದರೆ ನೋವಿಲ್ಲದ ಮರೆವಿನ ರಾಜ್ಯಕ್ಕೆ ತೇಲಿ ಹೋಗುವ ಅನುಭವ ಒಂದು ಕ್ಷಣಕೂಡ ಇರಲಿಲ್ಲ.

ಮೃತ್ಯು ಈ ರೀತಿ ಇದೆ ಎನ್ನುವುದು ಎಷ್ಟು ವಿಚಿತ್ರ... ಅಥವಾ ನಾನು ಅನುಭವಿಸಿದ್ದು, ಗ್ರಹಿಸಿದ್ದು ಸಾವಿನ ವಾಸ್ತವಿಕತೆಯ ಒಂದು ಇಣುಕುನೋಟ ಮಾತ್ರವೇ? ಎಷ್ಟೊಂದು ಪ್ರಶಾಂತವಾಗಿ ಅದೇ ಸಂಜೆ ಕೊನಾರಕ್‌ನನ್ನು ಬೆಟ್ಟಿಯಾದೆ- ಅವನ ಮುಖ ಇನ್ನೊಮ್ಮೆ ನೋಡಲು ಉಳಿದೆನಲ್ಲ ಎಂಬ ಕೃತಕೃತ್ಯತೆಯ ಭಾವನೆ. ಅವನ ಸುಂದರವಾದ, ಪ್ರಿಯವಾದ ಮುಖ. ಅಂಜಲಿ, ರಾಡ್ನಿ, ಪಟೇಲ್ ಕೂಡ ಬಂದಿದ್ದರು. ನಾನೇಕೆ ಸಾಯದೆ ಉಳಿದೆ? ಯಾಕೆ? ಬಹುಶಃಯಾವುದೋ ಕಾರಣಕ್ಕಾಗಿ....

ಜುಲೈ 28 ಕಷ್ಟದ ರಾತ್ರಿ ...ವಿಪರೀತ ನೋವು ಮತ್ತು ಆಯಾಸ. ಇದೆಲ್ಲದರ ಕೊನೆ ಎಂದು ? ಐ.ಜಿ. ಮತ್ತು ಸೂಪರಿಂಟೆಂಡೆಂಟ್ ಬಂದಿದ್ದರು—ನನ್ನ ಕೇಸನ್ನು ಶಿಫಾರಸ್ಸು ಮಾಡಿಲ್ಲವೆಂದು ದೂರಿದೆ—ಹೊರಟು ಹೋದರು—ಅವರ ದೆಸೆ

ಯಿಂದ ನನ್ನ ಮನಸ್ಸು ಉದ್ವಿಗ್ನವಾಗಿತ್ತು—ಮುಖ್ಯವಾಗಿ ಸೂಪರಿಂಟೆಂಡೆಂಟ್‌ನಿಂದ. ಐ.ಜಿ.ಗೆ ಮಾತ್ರ ಸ್ವಲ್ಪ ಮನುಷ್ಯತ್ವ, ಮುಲಾಜು ಇದೆ. ಅವರು ಬಂದಾಗ ಎಲ್ಲವೂ ತೃಪ್ತಿಕರವಾಗಿರುತ್ತೆ. ಅವರಿಲ್ಲದಾಗ ಯಾರಿಗೂ ಯಾವುದರ ಬಗ್ಗೆಯೂ ಗಮನವಿಲ್ಲ. ನಾನು ಇತ್ತೀಚೆಗೆ ತುಂಬಾ ಅಳುತ್ತಿದ್ದೇನೆ. ಗಂಟಲು ಮಾಂಸಖಂಡಗಳೆಲ್ಲ ನೋವಿನಿಂದ ಬೀಗಿವೆ.

ಜುಲೈ 29 ಕಳೆದ ರಾತ್ರಿ ನಿದ್ರೆಯೇ ಇಲ್ಲ—ಬಿಕ್ಕಳಿಸಿ ಅತ್ತಿದ್ದೇನೆ—ನನಗೆ ತಡೆಯೋಕಾಗಲಿಲ್ಲ. ಒಂದು ಗ್ಲಾಸ್ ತೊಳೆಯೋ ಅಂತ ಸುಲಭದ ಕೆಲಸ ಮಾಡಿದರೂ ನನಗೆ ವಿಪರೀತ ಸುಸ್ತಾಗುತ್ತೆ. ಬಹುಶಃ ಈ ಕೋರ್ಟಿಸಾನ್‌ನಿಂದ ನನ್ನ ಹೃದಯದ ಮೇಲೆ ತುಂಬಾ ದುಷ್ಪರಿಣಾಮವಾಗಿದೆಯೋ ಎಂಬ ಭಯ—ಏದುಸಿರು, ಒದ್ದೆಯಾಗುವಷ್ಟು ಮೈ ಬೆವರಿಕೆ. ಒಂದು ಸ್ವಲ್ಪ ಆಯಾಸ ಮಾಡಿಕೊಂಡರೂ ಸಾಕು. ನನ್ನ ಬೆನ್ನು, ಕುತ್ತಿಗೆ ಮುಖ್ಯವಾಗಿ ಎಡಭಾಗ ಕೆಲವು ಸಾರಿ ವಿಪರೀತ ನೋಯುತ್ತದೆ.

5–30 ಕೊನಾರಕ್ ಮತ್ತು ಇತರರು ಬರ್ತಾರೇಂತ ಕಾದೆ. ಆದರೆ ಯಾರೂ ಬರಲಿಲ್ಲ. ಸಂಜೆ ಮತ್ತು ರಾತ್ರಿಯೆಲ್ಲ ಒಂದು ಬಗೆಯ ಸಂಕಟ. ಊಟ ಮತ್ತು ಬಟ್ಟೆ ಬರೆಗಳು ಬಂದವು. ಆದರೆ ಕೊನಾರಕ್ ಬರಲಿಲ್ಲ. ಅವನಿಗೆ ಏನಾದರೂ ಆಗಿದೆಯೋ ? ಅಥವಾ ಯಾರಿಗಾದರೂ ಹುಷಾರಿಲ್ಲವೊ ? ಓ ದೇವರೇ ನನ್ನನ್ನು ಕಾಪಾಡು ! ಅಥವಾ ನನ್ನ ಕೇಸು ಶಿಫಾರಸ್ಸು ಮಾಡಿಲ್ಲವೆಂದು ದೂರಿದ್ದಕ್ಕೆ ಸೂಪರಿಂಟೆಂಡೆಂಟ್ ಹಗೆತನ ಸಾಧಿಸುತ್ತಿದ್ದಾನೊ ? ಈ ಮನುಷ್ಯನ ಜೈಲಿನಲ್ಲಿ ನಾನು ವಿಪರೀತ ಖಾಯಿಲೆಯಿಂದ ನರಳಿದ್ದೇನೆ. ಆದರೆ ಆಸ್ಪತ್ರೆಗೆ ಸೇರಿಸಲು ನನ್ನ ಕೇಸ್ ಶಿಫಾರಸ್ ಮಾಡಲು ಆಗೋಲ್ಲ ಅಂತಾನಲ್ಲ ಈ ವ್ಯಕ್ತಿ.

ಇಲ್ಲ, ಆ ಮನುಷ್ಯ ಅಷ್ಟು ಲುಚ್ಚಾ ಆಗಿರಲು ಸಾಧ್ಯವಿಲ್ಲ. ಅವನೂ ಕೂಡ ಒಬ್ಬ ತಂದೆ. ಆತನಿಗೆ ನಿರಾಶೆ

ಯೆಂದರೇನು, ವಿಪ್ಲವಳಾದ ಸ್ತ್ರೀಯೊಬ್ಬಳು ಹೇಗಿರ ಬಲ್ಲಳು ಅನ್ನೋದು ಚೆನ್ನಾಗಿ ಗೊತ್ತಿರಬೇಕು.....ಇಲ್ಲ ಆತ ಅಷ್ಟು ಸಣ್ಣತನದ ವ್ಯಕ್ತಿಯಾಗಿರಲಿಕ್ಕಿಲ್ಲ....ಒಳ್ಳೆಯುವ ನಾಗಿ ಕಾಣಿಸ್ತಾನೆ, ಆದರೆ ನಾಚಿಕೆ ಪ್ರವೃತ್ತಿಯುವನೆಂದು ನನ್ನ ಭಾವನೆ—ಓ ದೇವರೇ! ಅವರೆಲ್ಲಾ ಯಾಕೆ ಬರಲಿಲ್ಲಾಂತ ನನಗೆ ಗೊತ್ತಾಗಲಿಲ್ಲವಲ್ಲ.

ಜುಲೈ 29

ಸ್ನೇಹಲತಾರೆಡ್ಡಿ
ಸೆಂಟ್ರಲ್ ಜೈಲ್
ಗೃಹ ಖಾತೆಯು ಕಮೀಷನರ್
ಮತ್ತು ಸರ್ಕಾರಿ ಕಾರ್ಯದರ್ಶಿಗಳಿಗೆ
ವಿಧಾನ ಸೌಧ
ಪ್ರಿಯ ಕಮೀಷನರ್,

ನಾನು ಇದುವರೆಗೂ ನಿಮಗೆ ಮೂರು ಕಾಗದಗಳನ್ನು ಬರೆದಿದ್ದೇನೆ. ಆದರೆ ನಿಮ್ಮಿಂದ ಒಂದಕ್ಕೂ ಉತ್ತರ ಬರದಿರುವುದರಿಂದ ನನ್ನ ಕಾಗದಗಳು ನಿಮಗೆ ತಲುಪಿ ವೆಯೋ ಎಂಬ ಸಂದೇಹವಿದೆ. ಈ ತಿಂಗಳ 15 ರಂದು ಬರೆದ ನನ್ನ ಇತ್ತೀಚಿನ ಕಾಗದದಲ್ಲಿ ನನ್ನ ಖಾಯಿಲೆಯ ಬಗ್ಗೆ ಬರೆದಿದ್ದೆ.

22 ನೇ ತಾರೀಖು ನನಗಾದ ಅಗಾಧವಾದ ಆಸ್ತಮಾ ಅಟ್ಯಾಕ್‌ನಲ್ಲಿ ಸುಮಾರು ಒಂದು ಗಂಟೆಯ ಕಾಲ ಸಾವು-ಬದುಕಿನ ನಡುವೆ ನಾನು ಹೋರಾಡಬೇಕಾಯಿತು. ಶ್ವಾಸಕ್ಕಾಗಿ ಒದ್ದಾಡಿ, ಸಹಾಯಕ್ಕಾಗಿ ಚೀರಾಡಿ ಒಂದು ಗಂಟೆಯ ನಂತರ ಡಾಕ್ಟರ್ ಬಂದರು. ಅವರ ಮತ್ತು ನನ್ನ ಸುತ್ತಮುತ್ತಲಿದ್ದವರ ಪ್ರಕಾರ ನನ್ನ ಸ್ಥಿತಿ ಸಾವಿಗೆ ಕೆಲವಿಂಚು ದೂರದಲ್ಲಿತ್ತು. ಮೂರು ತಿಂಗಳ ಹಿಂದೆ ನನ್ನನ್ನು ಜೈಲಿಗೆ ಹಾಕಿದಾಗ ನಾನು ಮತ್ತು ಕುಟುಂಬ ದವರು ನನಗಿರುವ ತೀವ್ರ ಸ್ವರೂಪದ ಆಸ್ತಮಾದ ಬಗ್ಗೆ ಅಧಿಕಾರಿಗಳಿಗೆ ತಿಳಿಯಪಡಿಸಿದ್ದೆವು....

ನಾನು ಇಲ್ಲಿಗೆ ಬಂದಂದಿನಿಂದ ನನಗೆ ಆಸ್ತಮಾದಿಂದ ಸತತ

ವಾಗಿ ತೋಂದರೆಯಾಗುತ್ತಿದೆ. ಹಾಗಾಗಲು ಇಲ್ಲಿನ ವಾತಾವರಣವೇ ಕಾರಣ. ಅದಲ್ಲದೇ ನಿಷ್ಕಾರಣವಾಗಿ ನಾನು ಜೈಲುವಾಸ ಅನುಭವಿಸಬೇಕಾಗಿರುವುದು ನನಗೆ ಅತೀವ ದುಃಖದ ವಿಚಾರವಾಗಿದೆ. ನಾನು ವಿಪರೀತ ಅಳುತ್ತೇನೆ, ಇದರಿಂದ ನನ್ನ ಖಾಯಿಲೆ ಜಾಸ್ತಿಯಾಗುತ್ತದೆ. ನನ್ನನ್ನು ಕೆಲವು ದಿನಗಳ ಮಟ್ಟಿಗಾದರೂ ಆಸ್ಪತ್ರೆಗೆ ಕಳಿಸಿ ಎಂದು ಕೇಳಿಕೊಂಡರೆ ಅಧಿಕಾರಿಗಳು ಸುತ್ತು ಬಳಸಿ ಮಾತಾಡಿ ತಪ್ಪಿಸಿಕೊಳ್ಳುತ್ತಾರೆ. ಒಂದು ರಾತ್ರಿ ನನಗೆ ಆಸ್ತಮಾ ಅಟ್ಯಾಕ್ ಆದಾಗ ನನ್ನ ಬಳಿ ಯಾರೂ ಇರಲಿಲ್ಲ. ಒಂದು ಗಂಟೆಯ ನಂತರ ಡಾಕ್ಟರ್ ಬಂದರು. ಅದೃಷ್ಟವಶಾತ್ ಡಾಕ್ಟರ್ ಬರುವವರೆಗೆ ನಾನು ಬದುಕಿದ್ದೆ. ಆ ರಾತ್ರಿಯ ಘಟನೆಯ ನಂತರ ನಾಲ್ಕು ಜನ ಸರ್ಜನ್‌ರನ್ನೂ ನನ್ನ ಪರೀಕ್ಷೆಗಾಗಿ ಕರೆದು ಕೊಂಡು ಬಂದರು. ಜೈಲಿನ ಇಕ್ಕಟ್ಟಾದ ವಾತಾವರಣ ಮತ್ತು ದುರ್ವ್ಯವಸ್ಥೆ ನನ್ನ ಆರೋಗ್ಯಕ್ಕೆ ಅಪಾಯಕಾರಿ. ಆದ್ದರಿಂದ ತಕ್ಷಣವೇ ಆಸ್ಪತ್ರೆಗೆ ಕಳಿಸಬೇಕೆಂದು ಅವರೆಲ್ಲ ಒಮ್ಮತದಿಂದ ಘೋಷಿಸಿದರು. ಆದರೆ 20 ದಿನಗಳ ನಂತರ ಇಲ್ಲಿನ ಅಧಿಕಾರಿಗಳು ಒಬ್ಬ ಡಾಕ್ಟರ್ ಕೂಡ ನನ್ನನ್ನು ಆಸ್ಪತ್ರೆಗೆ ಸೇರಿಸಲು ಶಿಫಾರಸ್ ಮಾಡಿಲ್ಲವೆಂದು ತಿಳಿಸಿದರು. ವಿಕ್ಟೋರಿಯಾ ಆಸ್ಪತ್ರೆ ಮೆಟ್ಟಿಲು ಹತ್ತಿ ಇಳಿದಿದ್ದಾಯ್ತು. ಅಲ್ಲಿ ನಡೆದ ನಾಟಕವನ್ನು ಇಲ್ಲಿ ವಿವರಿಸುವುದು ಅಸಾಧ್ಯ. ಒಟ್ಟಿನಲ್ಲಿ ನನಗೊಂದು ಪ್ರೈವೇಟ್ ವಾರ್ಡ್ ಕೊಡುವುದು ಸಾಧ್ಯವಿಲ್ಲವೆಂದು ಸಾವಿರ ಕಾರಣಗಳನ್ನು ಕೊಟ್ಟರು. ನನಗೆ ನಿಜವಾಗಿ ಬೇಕಾಗಿದ್ದು, ಸತತವಾಗಿ ನನ್ನನ್ನು ಪೀಡಿಸುತ್ತಿದ್ದ ಆಸ್ತಮಾದಿಂದ ಸ್ವಲ್ಪ ಕಾಲದ ಮಟ್ಟಿಗಾದರೂ ಬಿಡುಗಡೆ—ಆಸ್ತಮಾ ಮತ್ತು ನನ್ನ ನಿಷ್ಕಾರಣವಾದ ಜೈಲುವಾಸ ನನ್ನನ್ನು ಛಿದ್ರಗೊಳಿಸಿವೆ. ಪದೇ ಪದೇ ನನಗೆ ಆಸ್ತಮಾ ಅಟ್ಯಾಕ್ ಆಗುತ್ತದೆ—ಹೆಚ್ಚು ಕಡಿಮೆ ಪ್ರತಿ ದಿನ—ದಿನಂಪ್ರತಿ ಕೋರ್ಟಿಸಾನ್ ಮತ್ತು ಇತರ ಹಾ...

ಕಾರಕ ಔಷಧಿಗಳ ಸೇವನೆಯಿಂದ (ದೇಹಕ್ಕೆ ಹಾನಿಕಾರಕ ಆದರೆ ಆಸ್ತಮಾ ಶಮನಕಾರಿ) ನನ್ನ ಆರೋಗ್ಯ ಹದ ಗೆಟ್ಟಿದೆ.

22 ರಂದು ನಡೆದ ಘಟನೆ ತುಂಬಾ ಗಂಭೀರಸ್ವರೂಪದ್ದು. ಅದನ್ನು ಜೈಲು ಅಧಿಕಾರಿಗಳು ಅರ್ಥ ಮಾಡಿಕೊಳ್ಳದಿದ್ದರೆ ಸರ್ಕಾರವಾದರೂ ಮಾಡಿಕೊಳ್ಳಬೇಕು. ಮುಂದಿನ ಸಾರಿ ಆಸ್ತಮ ಅಟ್ಯಾಕ್ ಆದಾಗ ಸಹಾಯ ಮಾಡುವುದಕ್ಕೆ ಕಾಲ ಮಿಂಚಿ ಹೋಗಿರಬಹುದು. ಪದೇ ಪದೇ ಆಸ್ತಮಾದ ಗಂಭೀರ ಸ್ಥಿತಿಯನ್ನ ದುರಿಸುವ ಶಕ್ತಿ ನನಗಿಲ್ಲ. ವಿನಾಕಾರಣ ಕಷ್ಟ ಅನುಭವಿಸಬೇಕಾಗಿರುವುದರಿಂದ ನನಗೆ ನಿರಾಶೆ, ವಿಸ್ಮೃತಿ ಕವಿಯುತ್ತದೆ. ನನಗಿರುವ ಒಬ್ಬನೇ ಮಗ ಮುಂದಿನ ತಿಂಗಳು ಯು.ಎಸ್.ಎ.ಗೆ ಹೋಗುತ್ತಿದ್ದಾನೆ. ನನ್ನ ವಿರುದ್ಧ ಯಾವ ಮೊಕದ್ದಮೆಯೂ ಇರದಿರುವುದರಿಂದ ನನಗೆ ಬಿಡುಗಡೆಯಾಗಬಹುದೆಂಬ ಆಶೆಯನ್ನಿಟ್ಟುಕೊಂಡಿದ್ದೆ. ಆದರೆ ನನ್ನನ್ನು ಬಿಡುಗಡೆ ಮಾಡುವ ಯಾವ ಸೂಚನೆಯೂ ಇದುವರೆಗೆ ಕಂಡು ಬಂದಿಲ್ಲ. ನನ್ನ ಮಗ ಹೊರಡುವ ಮೊದಲು ಕೆಲವು ದಿನಗಳ ಮಟ್ಟಿಗಾದರೂ ಅವನ ಜೊತೆಗಿರಬೇಕೆಂಬ ನನ್ನಾಶೆ ಈಡೇರುವುದಿಲ್ಲವೆಂದೆನಿಸಿರುವುದರಿಂದ ತುಂಬಾ ಖಿನ್ನಳಾಗಿದ್ದೇನೆ. ಮಾತ್ರ ಹೃದಯದ ಅರಿವು ನಿಮಗೆ ಸ್ವಲ್ಪವಾದರೂ ಇದೆಯೆಂದು ನನ್ನ ಭಾವನೆ—ಅದೂ ನಾನು ಅನಾವಶ್ಯಕವಾಗಿ ಜೈಲಿನಲ್ಲಿರುವಾಗ. ಜೈಲು ವಾಸಕ್ಕೆ ಯೋಗ್ಯವಾದ ಏನಾದರೂ ದುಷ್ಕೃತ್ಯ ಮಾಡಿದ್ದರೇ ಚೆನ್ನಾಗಿರುತ್ತಿತ್ತು ಎಂದು ಒಮ್ಮೊಮ್ಮೆ ಅನಿಸುತ್ತದೆ. ಇನ್ನಾವ ರೀತಿಯಿಂದಲೂ ನನ್ನನ್ನು ಜೈಲುವಾಸದಿಂದ ಮುಕ್ತಗೊಳಿಸುವುದು ನಿಮಗೆ ಅಸಾಧ್ಯವಾದರೆ ಕೊನೇ ಪಕ್ಷ ಪರೋಲ್ ಮೇಲೆಯಾದರೂ ಕೆಲವು ದಿನಗಳ ಮಟ್ಟಿಗೆ ದಯವಿಟ್ಟು ಬಿಡುಗಡೆ ಮಾಡಿ. ಕೆಲವು ಕಾಲ ನನ್ನ ಮಗ ಮತ್ತು ಬಂಧುಗಳ ಜೊತೆ ಕಾಲ ಕಳೆಯು

ಬೇಕೆಂಬುದು ನನ್ನ ಅಭಿಲಾಷೆ. ಈ ಯಾತನೆ ನನ್ನನ್ನು ಕೊಲ್ಲುತ್ತಿದೆ, ಅನಾರೋಗ್ಯವನ್ನುಂಟು ಮಾಡಿದೆ. ದಯವಿಟ್ಟು ಸಹಾಯ ಮಾಡಿ.

ಇತೀ ನಿಮ್ಮ
ಸ್ನೇಹಲತಾರೆಡ್ಡಿ

ಜುಲೈ 30 ನಾನು ಪುನಃ ಅವರೆಲ್ಲಾ ಯಾಕೆ ಬರಲಿಲ್ಲವೆಂದು ಕೇಳಿದೆ. ಆದರೆ ಉತ್ತರವಿಲ್ಲ– ನಾನು ಕಾದೇ ಇದ್ದೆ. ಡಾಕ್ಟರ್ ಬಂದರು. ನಾನು ವ್ಯಸನಾಕ್ರಾಂತಳಾಗಿದ್ದೆ –ಆದರೆ ಏನೂ ಆಗಲಿಲ್ಲ. ನಾನು ಐ. ಜಿ.ಯವರ ಸಮ್ಮುಖದಲ್ಲಿ ಸೂಪರಿಟೆಂಡೆಂಟರ ಜೊತೆ ಅವಮಾನಕರವಾದ ರೀತಿಯಲ್ಲಿ ವರ್ತಿಸಿರುವುದರಿಂದ ನನ್ನ ಕುಟುಂಬದ ಸಂದರ್ಶನಗಳನ್ನು ರದ್ದು ಪಡಿಸಿದ್ದಾರೆಂದು ಡಾಕ್ಟರ್ ತಿಳಿಸಿದರು....

ಜುಲೈ 31 ವೇಣು ಗೋಪಾಲ, ನಂಜೇಗೌಡ ಮತ್ತು ಪಾಟೀಲ್, ಜೆ. ಎಚ್. ಪಾಟೀಲರಿಂದ ಒಂದು ಕಾಗದ ತಂದು ಕೊಟ್ಟರು. ಅದರಲ್ಲಿ ಉಪವಾಸ ಮುಷ್ಕರ ನಿಲ್ಲಿಸಬೇಕೆಂಬ ಬೇಡಿಕೆಯಿತ್ತು–ಪಟ್ಟಾಭಿಗೆ ಹೇಳಿ ಕಳಿಸಿದ್ದೇವೆ ಎಂದರು. ಪಟ್ಟಾಭಿ ಯಾವಾಗ ಬರುತ್ತಾರೆಂದು ಕೇಳಿದ್ದಕ್ಕೆ ಭಾನುವಾರ ಅಂದರು– ಮುಷ್ಕರ ನಿಲ್ಲಿಸುವುದಕ್ಕೆ ನಾನು ಒಪ್ಪಿದೆ.

ಆಗಸ್ಟ 1 ಪಟ್ಟಾಭಿ ಬರಲಿಲ್ಲ–ನನ್ನನ್ನು ನೋಡೋದಕ್ಕೆ ಯಾರೂ ಬರಲಿಲ್ಲ - ವಾರ್ಡರ್‌ಗಳನ್ನು ಹಿಂದೆ ಮುಂದೆ ಓಡಾಡಿಸಿದೆ– ಅವರು ವಾಪಸ್ ಬಂದು ಇವತ್ತು ಭಾನುವಾರ, ರಜಾ, ನಿಮ್ಮ ಗಂಡ ನಾಳೆ, ಸೋಮವಾರ ಬರ್ತಾರೆ ಅಂದರು.

ಆಗಸ್ಟ 2 ನಾನು ಕಾದೇ ಇದ್ದೆ– ಆದರೆ ಅವರು ಬರಲಿಲ್ಲ– ನಿನ್ನೆ ರಾತ್ರಿಯಿಂದ ನಾನೇನು ತಿಂದಿಲ್ಲ– ಪುನಃ ಹೇಳಿ ಕಳಿಸಿದೆ– ಪಟ್ಟಾಭಿ ನಾಳೆ, ಮಂಗಳವಾರ ಬರ್ತಾರೆ ಅಂತ ಈಗ ಹೇಳ್ತಾರೆ–ಪುನಃ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದೆ,

ನನ್ನ ಮೇಲೆ ಖಾಯಿಲೆಯಾದಾಗ ಡಾಕ್ಟರ್‌ಗೆ ಹೇಳಿ ಕಳಿಸೋಲ್ಲ, ನನ್ನ ಬಂಧು ಬಾಂಧವರನ್ನು ನೋಡೋದಕ್ಕೆ ಬಿಡಿ ಅಂತ ಕೇಳಿ ಕೊಳ್ಳೋಲ್ಲ – ಅಧಿಕಾರಿಗಳು ನನ್ನನ್ನು ಕೊಲ್ಲೋದಕ್ಕೆ ಸಿದ್ಧತೆ ನಡೆಸಿದ್ದಾರೆ. ನಾನು ಅದಕ್ಕೆ ತಯಾರಿದ್ದೇನೆ. ಅವರಿಗಿನ್ನೇನು ಮಾಡೋದಕ್ಕೆ ಸಾಧ್ಯ?

ಆಗಸ್ಟ 3 ಇದೊಂದು ನೈತಿಕ ಪ್ರಶ್ನೆ ನನಗೀಗ - ಐ. ಜಿ. ಮತ್ತು ಪಟ್ಟಾಭಿಯ ಸಮ್ಮುಖದಲ್ಲಿ ಸೂಪರಿಂಟೆಂಡೆಂಟ್ ಕ್ಷಮಾ ಯಾಚನೆ ಮಾಡದ ಹೊರತು ನಾನು ಏನನ್ನೂ ತಿನ್ನೋಲ್ಲ, ಕುಡಿಯೋಲ್ಲ. ಆ ವ್ಯಕ್ತಿ ನನ್ನನ್ನು ನಡೆಸಿಕೊಂಡಿರುವ ರೀತಿಯ ಬಗ್ಗೆ ವಿಚಾರಣೆ ಯಾಗಬೇಕು.

ಆಗಸ್ಟ 28

ಆಗಸ್ಟ 29

ಆಗಸ್ಟ 30 ಭಯಂಕರದ ದಿನಗಳು.

ಈ ಆತ್ಮದ ಕತ್ತಲ ರಾತ್ರಿಯಲ್ಲಿ ಬೆಳಗಿನ ಜಾವ ಮೂರು ಗಂಟೆ; ದಿನದ ಮೇಲೆ ದಿನಗಳು. ನಿಜವಾಗಿ ನನಗೆ ಈ ಕ್ಷಣಗಳಲ್ಲಿ ಸಾಯಬೇಕೆಂಬ ಬಯಕೆ ಅದಮ್ಯವಾಗುತ್ತದೆ.

ಸೆಪ್ಟೆಂಬರ್ 1 ಚಬಲಾನಿ ಅತ್ಯಂತ ಕೆಳಪೆ ವರ್ಗದ ಪರಪೀಡನ ಪ್ರಿಯ. ಅವನೊಬ್ಬ ಹೇಡಿ, ಸುಳ್ಳ, ಅವನಂಥ ಮನುಷ್ಯನನ್ನು ನಾನೆಂದೂ ನೋಡಿಲ್ಲ, ಮರ್ಯಾದೆಯಿಲ್ಲದವ, ಒರಟ, ವಕ್ರಬುದ್ಧಿಯವನು—ತುಂಬಾ ಖಾರವಾದ ಮಾತುಗಳು, ಆದರೆ ಪ್ರತಿ ಶಬ್ದವೂ ನಿಜ. ನನ್ನ ಬಗ್ಗೆ ಹೇಳುವುದಾದರೆ ಅವನ ದೆಸೆಯಿಂದಾಗಿ ಹಲವಾರು ಬಾರಿ ಜೀವನದ ಅಂತಿಮ ಕ್ಷಣಗಳನ್ನು ತಲುಪಿದ್ದೇನೆ, ಗುಡ್ಡೆಯಾದ ಗೋಡೆಗಳನ್ನು ತಡವಿದ್ದೇನೆ. ಅಲ್ಲಿಂದ ಮುಂದೆ ನನಗೆ ನಡೆಯಲಾಗಿಲ್ಲ. ನನ್ನ ವಿಚಾರಗಳು, ಯೋಚನೆಗಳು ಅಂಗವಿಹೀನವಾಗಿವೆ. ನಾನು ನಿಸ್ಸಹಾಯಕಳು. ನಾನು ನಿಧಾನವಾಗಿ ಇಲ್ಲಿಯೇ ಸಾಯುತ್ತೇನೆ—ಭೂತದ ಮರೆತು ಹೋದ ಸುಂದರ ಹಾಡಿನಂತೆ. ನನ್ನನ್ನೇಕೆ ಈ

ಸಾರ್ವಜನಿಕ ಸ್ಥಳದಲ್ಲಿ ಸಾಯುವುದಕ್ಕೆ ಬಲಾತ್ಕರಿಸು ತ್ತಾರೆ?

ಸೆಪ್ಟೆಂಬರ್ 4

ಯಾರೂ ಮುಖ ತೋರಿಸಿಲ್ಲ. ನಿನ್ನೆ ರಾತ್ರಿ ಒಂದು ಗಂಟೆಗೆ ಆಸ್ತಮ ಉಲ್ಬಣವಾಗಿತ್ತು. ರೂಮಿನ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ಅಲೆದಾಡಿದೆ—ಎರಡು ಕಾಂಪೋಸ್ ಮಾತ್ರೆಗಳನ್ನು ಕಳಿಸಿದ್ದನ್ನು ಬಿಟ್ಟರೆ ಇನ್ನಾರೂ ಈ ಕಡೆ ಮುಖ ಹಾಕಲಿಲ್ಲ-ರಾತ್ರಿ ವೇಣುಗೋಪಾಲ ಬಂದು ನನ್ನ ಕುಟುಂಬದ ಡಾಕ್ಟರ ಹೆಸರನ್ನು ಸರ್ಕಾರ ಕೇಳುತ್ತಿದೆ ಎಂದ. ಲಿಖಿತವಾದ್ದನ್ನು ಬಿಟ್ಟು ಇನ್ನಾವು ದನ್ನೂ ನಾನೀಗ ನಂಬೋದಿಲ್ಲ.

ಸೆಪ್ಟೆಂಬರ್ 6

'ಮೀಸಾ' ಸ್ನೇಹಿತರಿಗೆ ತನ್ನನ್ನು ಆಸ್ಪತ್ರೆಗೆ ಕಳಿಸಲಿಲ್ಲ ವೆಂದು ಉಪವಾಸ ಮುಷ್ಕರ ಮಾಡಿದಳೆಂದು ಪಟ್ಟಾಭಿಗೆ ಕಾಗದ ಬರೆಯಿರೆಂದು ಸೂಪರಿಂಟೆಂಡೆಂಟ್ ತಿಳಿಸಿದ—ಮೂರ್ಖತನ, ಎಂಥ ಸುಳ್ಳು. ಎಂಥ ದೊಡ್ಡ ಸುಳ್ಳು. ಅವರು ನನಗೆ ಅನ್ನ ಸತ್ಯಾಗ್ರಹ ಕೊನೆಯ ಆಯುಧ ವೆಂದು ತಿಳಿಸಿ ಅದರ ಬಗ್ಗೆ ಮರು ತೀರ್ಮಾನ ಕೈಗೊಳ್ಳು ವಂತೆ ಹೇಳಿದ್ದರಲ್ಲಿ ಆಶ್ಚರ್ಯವಿಲ್ಲ. ಅವರು ನನ್ನನ್ನು ನಡೆಸಿಕೊಂಡ ರೀತಿಯ ಬಗ್ಗೆ ಅವರಿಗೆ ಅರಿವೇ ಇದ್ದಂತಿಲ್ಲ. ಮೀಸಾ ಬಂದಿಗಳಿಗಿರುವ ಹಕ್ಕು, ಸವಲತ್ತುಗಳ ಬಗ್ಗೆ ನನಗೇನೂ ತಿಳಿಯದಂತೆಮಾಡಲು ಪ್ರಯತ್ನಿಸುತ್ತಿದ್ದಾರೆ. 'ಸಿ' ವರ್ಗದ ಖೈದಿಗಳ ಜೊತೆ ಗಾಳಿ, ಬೆಳಕಿಲ್ಲದ ಕೋಣೆಯಲ್ಲಿ ನನ್ನನ್ನು ಹಂದುಗಿಸಿಡಲು ಅವರಿಗೇನು ಅಧಿಕಾರವಿದೆ? ಇತರ ಮೀಸಾ ಖೈದಿಗಳ ಹತ್ತಿರದಲ್ಲಿಯೇ ನನಗೊಂದು ಕೋಣೆಯನ್ನು ಸಿದ್ಧಪಡಿಸಬಹುದು—'ಎ' ಅಥವಾ 'ಬಿ' ವರ್ಗದ್ದಾದರೂ ಪರವಾಗಿಲ್ಲ. ಇಲ್ಲಿ ನನಗಾವ ರೀತಿಯ ಪ್ರೇರಣೆಯೂ ಬದುಕಲೂ ಇಲ್ಲ-ವಾಕ್ ಇಲ್ಲ, ಗಾಳಿ ಬೆಳಕಿಲ್ಲ: ಬಾಹ್ಯ ಪ್ರಪಂಚದೊಡನೆ ಯಾವ ಸಂಪರ್ಕವೂ ಇಲ್ಲ—ಮೀಸಾ ಕಾಯಿದೆ ನ್ಯಾಯ ಬದ್ಧವಾಗಿ, ಉದಾರವಾಗಿದೆ ಎಂದು ನನಗೆ ಗೊತ್ತು. ಆದರೆ ಈ ಮನುಷ್ಯ ಒಂದೇ ಸರ್ಕಾರದ ದುಡ್ಡು

ಉಳಿಸೋದಕ್ಕೆ ಇಲ್ಲವೇ ನನ್ನನ್ನು ಹಿಂಸಿಸುವುದಕ್ಕೆ ಇಲ್ಲಿ ಕೂಡಿ ಹಾಕಿದ್ದಾನೆ. ನನಗೆ ನ್ಯಾಯಬದ್ಧವಾಗಿ ದೊರಕಬೇಕಾಗಿರುವ ಸವಲತ್ತುಗಳ ಬಗ್ಗೆ ಉದ್ದೇಶಪೂರ್ವಕವಾಗಿ ಏನನ್ನೂ ತಿಳಿಸುತ್ತಿಲ್ಲ. ನನ್ನನ್ನು ಇತರ ಮೀಸಾ ಖೈದಿಗಳ ಜೊತೆಗಿಟ್ಟರೆ ತನ್ನ ಆಟ ನಡೆಯುವುದಿಲ್ಲವೆಂದು ಅವನಿಗೆ ಗೊತ್ತು. ಅಲ್ಲಿ ಪ್ರತಿಯೊಬ್ಬರೂ ಸಂಭಾವಿತರು, ಸುಸಂಸ್ಕೃತರು. ಅವರೆಲ್ಲ ನನ್ನ ಯೋಗಕ್ಷೇಮ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ನಾನೂ ಹೀಗೆ ಏಕಾಕಿಯಾಗಿ ಇರಬೇಕಾದ ಪ್ರಮೇಯವಿರುತ್ತಿರಲಿಲ್ಲ. ಇದನ್ನೆಲ್ಲ ಯೋಚಿಸಿದಾಗ ಚಬಲಾನಿ ಒಬ್ಬ ವಕ್ರಬುದ್ಧಿಯ ಮನುಷ್ಯ, ನನ್ನನ್ನು ಹಿಂಸಿಸುವುದಕ್ಕಾಗಿಯೇ ಹೀಗೆ ಬೇರೆ ಇಟ್ಟಿದ್ದಾನೆ ಅನಿಸುತ್ತದೆ. ದೇವರೇ, ಬೆಳಿಗ್ಗೆ ಹಾಸಿಗೆಯಿಂದ ಏಳುವುದೆಂದರೆ ಪರಮ ಸಂಕಟ. ಇಂದು ಇನ್ನಾವ ಹೊಸ ಬಗೆಯ ಹಿಂಸೆಯನ್ನೆದುರಿಸಬೇಕೋ ಎಂಬ ಭಯ.

ಐ.ಜಿ.ಗೆ ಒಂದು ಅರ್ಜೆಂಟ್ ಕಾಗದವನ್ನು ತೆಗೆದುಕೊಂಡು ಹೋಗಬೇಕೆಂದು ಪಾಟೀಲ್‌ಗೆ ಹೇಳಿ ಕಳಿಸಿದ್ದೇನೆ. ಅವನೇನಾನರೂ ಬಂದರೆ ಕಾಗದ ತೆಗೆದುಕೊಂಡಿದ್ದಕ್ಕೆ ಒಂದು ಸಹಿ ಹಾಕಬೇಕಾಗುತ್ತದೆ.

ಕಾಗದ ತಗೊಂಡು ಹೋಗೋದಕ್ಕೆ ಪಟೇಲ್ ಬಂದ, ಸಹಿ ಹಾಕಲು ಹೇಳಿದೆ. ಕೇಳಿಕೊಂಡು ಬರುತ್ತೇನೆಂದ ಹೋದ—ನಂತರ ಬಂದು ಸಹಿ ಹಾಕೋದು ಸಾಧ್ಯವಿಲ್ಲವೆಂದು ತಿಳಿಸಿದ. ನಾನು ಬರೆದ ಕಾಗದಗಳನ್ನು ತಲುಪಿಸೋದಿಲ್ಲಾಂತ ನಾನು ನಂಬಿದ್ದು, ಪದೇ ಪದೇ ಹೇಳ್ತಾ ಇದ್ದದ್ದು ನಿಜ ಅನ್ನೋದಕ್ಕೆ ಈಗ ದಾಖಲೆ ಸಿಕ್ಕಿತು.

ಸೆಪ್ಟೆಂಬರ್ 7 ಪುನಃ ಆಸ್ತಮಾ ಅಟ್ಯಾಕ್ ಆಯ್ತು—ಕೆಟ್ಟದಿನ—ಪ್ರತಿದಿನ ಡಾಕ್ಟರ್ ಬರ್ತಾರೆ. ತುಂಬಾ ಒಳ್ಳೆಯ ಮನುಷ್ಯ. ಐ.ಜಿ. ಇನ್ನೂ ಬಂದಿಲ್ಲ.

ಸೆಪ್ಟೆಂಬರ್ 8 ರಾತ್ರಿ ಮತ್ತೆ ಅಟ್ಯಾಕ್ ಆಯ್ತು, ಉಪಶಮನವಾಗಲಿಲ್ಲ. ಒಳ್ಳೆಯದೊ, ಕೆಟ್ಟದ್ದೊ, ಬೇಗ ಆಗಲಿ, ದೇವರೆ.

| | |
|---|---|
| ಸೆಪ್ಟೆಂಬರ್ 9 | ಕೆಮ್ಮು ನಿಂತಿಲ್ಲ– ಔಷಧಿ ಮತ್ತು ನಿದ್ರಾಹೀನತೆ ನನ್ನನ್ನು ಕೊಲ್ಲುತ್ತಿವೆ. |
| ಸೆಪ್ಟೆಂಬರ್ 10 | ರಾತ್ರಿ ಕೆಮ್ಮು ಪ್ರಾರಂಭವಾಯ್ತು–ನನ್ನ ಶ್ವಾಸನಾಳಗಳು ಉಬ್ಬಿವೆ. ತುಂಬಾ ವಿಹ್ವಲ ಪರಿಸ್ಥಿತಿ– ಕೊನಾರಕ್, ನಂದ ಮತ್ತು ಪಟ್ಟಾಭಿ ಬಂದಿದ್ದರು. ತುಂಬ ಸಂತೋಷ ವಾಯ್ತು. ಆದರೆ ಹುಷಾರಿಲ್ಲ. |
| ಸೆಪ್ಟೆಂಬರ್ 12 | ರಾತ್ರಿ ತುಂಬ ಕೆಟ್ಟ ಅಟ್ಯಾಕ್ ಆಯ್ತು – ಯಥಾ ಪ್ರಕಾರ ಇಂಜೆಕ್ಷನ್ ತಗೊಂಡೆ. ತುಂಬಾ ಸಾರಿ ವಿಸ್ಮೃತಿ–ಇನ್ನೂ ಕೆಮ್ಮು ಕಫ ಇದೆ. |
| ಸೆಪ್ಟೆಂಬರ್ 13 | ಕೆಟ್ಟ ರಾತ್ರಿ — ಕೆಟ್ಟ ಅಟ್ಯಾಕ್.<br>ಐ.ಜಿ. ಸೂಪರಿಂಟೆಂಡೆಂಟ್ ಜೊತೆಗೆ ಬಂದಿದ್ದರು. ಅವ ರನ್ನು ಒಳಗೆ ಬರೋದಕ್ಕೆ ಹೇಳಿದೆ. 'ನೀವು ಬರೋ ಹೊತ್ತಿಗೆ ನಾನು ಹೆಚ್ಚೂ ಕಡಿಮೆ ಸತ್ತೇ ಹೋಗಿದ್ದೇನೆ' ಅಂದೆ. ಇಲ್ಲ, ಇಲ್ಲ ನನಗೆ ಬೇರೆ ತುಂಬಾ ಕೆಲಸವಿತ್ತು ಇತ್ಯಾದಿ. ನನ್ನ ಈ ದುರವಸ್ಥೆಗೆ ನಿಮ್ಮ ಸೂಪರಿಂಟೆಂಡೆಂಟೆ ಕಾರಣ ವೆಂದು ಐ. ಜಿ.ಗೆ ಹೇಳಿದೆ. ಐ.ಜಿ. ಸೂಪರಿಂಟೆಂಡೆಂಟನ್ನು ವಾಪಸು ಕಳಿಸಿದರು. |
| ಸೆಪ್ಟೆಂಬರ್ 14 | ವಿಪರೀತ ಮಾನಸಿಕ ಯಾತನೆಯಿಂದ ಎದೆಗುಂದಿದ್ದೇನೆ– ಈಗಲಾದರೂ ಐ.ಜಿ. ನನಗಾಗಿ ಏನಾದರೂ ಮಾಡ ಬೇಕು, ಇಲ್ಲದಿದ್ದರೆ ಅನಿವಾರ್ಯವಾಗಿ ಸರ್ಕಾರಕ್ಕೆ ಮನವಿ ಮಾಡಿಕೊಳ್ಳಬೇಕಾಗುತ್ತದೆ. |
| ಸೆಪ್ಟೆಂಬರ್ 16 | ನನಗೆ ಹುಷಾರಿರಲಿಲ್ಲ- ಪಾಟೀಲ್ ದಿನಕ್ಕಿಂತ ಮೊದಲೇ ಬಂದು ನನ್ನ ಆರೋಗ್ಯದ ಬಗ್ಗೆ ವಿಚಾರಿಸಿಕೊಂಡ. ನಂತರ ಇದ್ದಕ್ಕಿದ್ದಂತೆ ಸೂಪರಿಟೆಂಡೆಂಟ್, ಕಲ್ಯಾಣಮ್ಮ, ಗಡ್ಡಧಾರಿ ಪೋಲಿಸನ ಜೊತೆ ಬಂದರು. ನನ್ನನ್ನು ದುರು ಗುಟ್ಟಿಕೊಂಡು ಸೂ. ನೋಡಿದ. ನಾನೇನೂ ಪ್ರತಿಕ್ರಿಯೆ ತೋರಿಸದಿದ್ದರಿಂದ ಫ್ಯಾನ್ ಕಡೆ ನೋಡುತ್ತ 'ಹೇಗಿದ್ದೀರಿ' ಎಂದು ಕೇಳಲು ಹೊರಟಿದ್ದ. ನಾನು ನಯವಾಗಿಯೇ ಅವನನ್ನು ಮಧ್ಯೆ ತಡೆದು ಹೇಳಿದೆ : |

'ಚಬಲಾಸಿಯಂವರೆ. ಒಂದೇ ಐ.ಜಿ. ಇಲ್ಲವೇ ನಿಮಗೆ ಸರಿ ಸಮರಾದ ಅಧಿಕಾರಿಯೊಬ್ಬರ ಸಮ್ಮುಖದಲ್ಲಿ ಮಾತ್ರ ನನ್ನನ್ನು ಮಾತಾಡಿಸಿ, ಸರಿಯಾದ ಸಾಕ್ಷಿಗಳಿಲ್ಲದಿದ್ದರೆ ಅವಳು ನನ್ನ ಜೊತೆ ಅಸಭ್ಯವಾಗಿ ವರ್ತಿಸಿದಳೆಂದು ನಾಳೆ ನನ್ನನ್ನು ನೀವು ಆಪಾದಿಸಬಹುದು' ತಕ್ಷಣವೇ ಅವನು 'ಹಾಗೇ ಆಗಲಿ, ನಾನು ನಿಮ್ಮ ಹತ್ತಿರ ಮಾತಾಡೋಲ್ಲ ನೀವೂ ನನ್ನ ಹತ್ತಿರ ಮಾತಾಡೋದು ಬೇಡ' ಅಂದ. ಈ ತೀರ್ಮಾನದಿಂದ ಯಾರಿಗೂ ನಷ್ಟವಿಲ್ಲ. ಅವನು ಮಾತಾಡೋಲ್ಲ, ಆದರೆ ಬೆನ್ನಲ್ಲಿ ಇರಿಯುತ್ತಾನೆ. ಅವನ "ಹೇಗಿದ್ದೀರಿ ?" ಅನ್ನೋ ಪ್ರಶ್ನೆ ಕರುಣೆಯಿಂದಲ್ಲ, ವಿಶ್ವಾಸದಿಂದಲ್ಲ. ಸೊಕ್ಕಿನಿಂದ ಹುಟ್ಟಿರೋದು. ಎಂಥ ಕುಟಿಲೋಪಾಯದ ವ್ಯಕ್ತಿ ಅವನು. ಐ.ಜಿ.ಯ ಎದುರು ಹಲ್ಲು ಗಿಂಜುತ್ತಾನೆ. ನಾಯಿಯ ಹಾಗೆ ಬಾಲ ಆಡಿಸಿ ಕೊಂಡಿರ್ತಾನೆ. 'ನಾಚಿಕೆ' ಅನ್ನೋ ಪದಾನ ಅವನ ಸ್ವಭಾವಕ್ಕೆ ಉಪಯೋಗಿಸೋಕಾಗೋಲ್ಲ. ನನಗವನನ್ನು ಕಂಡರಾಗೋಲ್ಲ. ಅವನನ್ನೊಂದು 'ಕ್ರಿಮಿ'ಯೆಂದು ಭಾವಿಸುತ್ತೇನೆ.

ಸೆಪ್ಟೆಂಬರ್ 19

ಇಂದೆಲ್ಲರಿಗೂ ವಿಶ್ರಾಂತಿಯ ದಿನ, ಶ್ರಮದ ಕೆಲಸವಿಲ್ಲ– ಆದರೆ ನನ್ನ ಆತ್ಮದಲ್ಲಿ ಮಾತ್ರ ಹಸಿವು–ನೋವು ಇದೆ– ನನಗೆ ನನ್ನ ಮಗ ಬೇಕು. ನನಗವನನ್ನು ನೋಡಬೇಕು ಅನ್ನಿಸುತ್ತೆ, ತುಂಬ ಮಾತಾಡಬೇಕು ಅನ್ನಿಸುತ್ತೆ, ತುಂಬಾ ಮಾತಾಡಬೇಕು- ಈ ಕೆಲವು ಕಡೆಯ ದಿನಗಳಲ್ಲಾದರೂ ಅವನ ಜೊತೆಗಿರಬೇಕು ಅನಿಸುತ್ತೆ–ನನ್ನ ಮಗ ಹೊರಟು ಹೋಗ್ತಿದಾನೆ. ಮುಂದಿನಸಾರಿ ನಾನವನನ್ನು ನೋಡಿದಾಗ ಅವನೊಬ್ಬ ಬೆಳೆದ ಗಂಡಸಾಗಿರ್ತಾನೆ, ಮಗುವಿಗಾಗಿ ಅವನಲ್ಲಿ ನಾನು ಹುಡುಕಬೇಕಾಗುತ್ತೆ. ಆಗ ಹೇಗಿರ್ತಾನೆ? ನಾನವನನ್ನು ಯಾವಾಗ ನೋಡ್ತೀನಿ? ನನಗೇಕೆ ಈ ಯಾತನೆ? ಯಾಕೆ?

ಸೆಪ್ಟೆಂಬರ್ 20

12ನೇ ತಾರೀಖು ಐ.ಜಿ. ಬಂದು ಹೋದ ಮೇಲೆ

ಒಂದು ಜೀವವೂ ನನ್ನನ್ನು ನೋಡಲೋದಕ್ಕೆ ಬಂದಿಲ್ಲ. ನನ್ನ ಬಗ್ಗಾಗಿ ಐ.ಜಿ. ಸ್ವಲ್ಪಶ್ರಮ ತಗೊಳ್ಳಬಹುದೆಂದು ತಿಳಿದಿದ್ದೆ. ಆದರೆ ಇದುವರೆಗೂ ಅವರೇನೂ ಮಾಡಿಲ್ಲ. ಇವತ್ತು ಬಿ.ರೆಡ್ಡಿ 'ಮೀಸಾ' ಎಂದರೇನು ಅನ್ನುವುದನ್ನು ನನಗೆ ಸ್ಪಷ್ಟಪಡಿಸಿದರು. ನಾನು ಮತ್ತು ಎಂ. ಎಸ್. 'ಮೀಸಾ' ಕಾನೂನ ಪ್ರಕಾರ ಅಪರಾಧಿಗಳಲ್ಲ. ಹಾಗಾದರೆ ನಾವೇಕೆ ಇಲ್ಲಿದ್ದೇವೆ? ನಮ್ಮನ್ನು ನಿರ್ದೋಷಿಗಳೆಂದು ಘೋಷಿಸಬೇಕು. ಕೊನೇ ಪಕ್ಷ ಸರ್ಕಾರದಿಂದ ನನಗೊಂದು ವಿವರಣೆ ಬೇಕು.

ಈ ಜಗತ್ತಿನಲ್ಲಿ ಯಾರಿಗೂ ದಯಾ, ಕರುಣೆ ಇಲ್ಲ (ನನ್ನ ಬಂಧುಗಳಿಗೆ ಕೂಡ) ಕೊನಾರಕ್ ಹೋಗ್ತಾ ಇದ್ದಾನೆ. ನಾನು ನಿಷ್ಕಾರಣವಾಗಿ ಎಲ್ಲರಿಂದಲೂ ನಿರ್ಲಕ್ಷಿಸಲ್ಪಟ್ಟಿದ್ದೇನೆ.

ಸಂಜೆಯೆಲ್ಲಾ ಕಾದೆ. ಅವರೆಲ್ಲಾ ಯಾಕೆ ಬಂದಿಲ್ಲ? ಯಾಕೆ? ಯಾಕೆ?

ಸೆಪ್ಟೆಂಬರ್ 23 — ಕೊನಾರಕ್, ನಂದ, ಪಟ್ಟಾಭಿ ಮತ್ತು ವಿದ್ಯಾ ಅರ್ಧ ಗಂಟೆ ಮಟ್ಟಿಗೆ ಬಂದಿದ್ದರು. ಅಗಾಧವಾದ ಪ್ರೀತಿ ವಿಶ್ವಾಸವನ್ನು ವ್ಯಕ್ತಪಡಿಸಲು ಅರ್ಧ ಗಂಟೆ ಸಾಕೇ?

ಸೆಪ್ಟೆಂಬರ್ 24 — ಐ.ಜಿ.ಯವರಿಂದ ಸ್ಪೆಷಲ್ ಪರ್ಮಿಷನ್ ತೆಗೆದುಕೊಂಡು ನನ್ನ ಕುಟುಂಬದವರು ಇವತ್ತು ಬರಲು ಪ್ರಯತ್ನಿಸಿದರು. ಆದರೆ ಬರಲಾಗಲಿಲ್ಲ. ನನ್ನ ಮಗನನ್ನು ನೋಡಲಾಗಲಿಲ್ಲ. ನನ್ನ ಮಗ, ಓ ದೇವರೇ! ಚಬಲಾನಿಯನ್ನು ಎಷ್ಟು ಶಪಿಸಿದರೂ ಸಾಲದು. ಅವನು ದುಷ್ಟ, ಕ್ಷುದ್ರ ಜೀವಿ. ನನ್ನ ಜೀವನದಲ್ಲಿ ಇದೇ ಮೊದಲ ಬಾರಿಗೆ ಒಬ್ಬ ವ್ಯಕ್ತಿಯ ಬಗ್ಗೆ ನನ್ನಲ್ಲಿ ಈ ಭಾವನೆಗಳು ಹುಟ್ಟಿವೆ.

ಸೆಪ್ಟೆಂಬರ್ 25 — ಕೊನಾರಕ್ ಈ ದಿನ ಬೆಳಗಿನ ಜಾವ ಯು.ಎಸ್.ಎ.ಗೆ ಹೊರಟು ಹೋದ. ದೇವರು ಅವನಿಗೆ ಒಳ್ಳೆಯದು ಮಾಡಲಿ.

ಸೆಪ್ಟೆಂಬರ್ 26 — ಕಷ್ಟಮಯವಾಗಿದೆ.

ಸೆಪ್ಟೆಂಬರ್ 27 — ವಿಪರೀತ ಕಷ್ಟಮಯವಾಗಿದೆ.

ಸೆಪ್ಟೆಂಬರ್ 28

ಐ.ಜಿ. ಬಂದಿದ್ದರು. ವಾಸನೆಯ ದಾಲ್, ಬೇಯಿಸಿದ ಕ್ಯಾರೆಟ್ ಮತ್ತು ಬಟಾಣಿ......ನನ್ನ ನೋವನ್ನು ಆಹಾರ ದಲ್ಲಿ ಮರೆಯುವುದಕ್ಕೆ ಪ್ರಯತ್ನಿಸುತ್ತೇನೆ – ಆದರೆ ಬಹಳಕಾಲದವರೆಗಲ್ಲ.

* * * * *

ಸ್ನೇಹಲತಾರ ಆರೋಗ್ಯ ದಿನೇ ದಿನೇ ಹದಗೆಟ್ಟಿತು. ಆಕೆಗೆ ಅಸ್ತಮಾ ಅಟ್ಯಾಕ್ ಪದೇ ಪದೇ ಆಗ ತೊಡಗಿತು. ಆಕೆಯ ಖಾಸಗಿ ವೈದ್ಯರ ಶುಶ್ರೂಷೆ ತಪ್ಪಿತು. ಪರಿಣಾಮಕಾರಿಯಾದ ಆದರೆ ತುಂಬಾ ಹಾನಿಕಾರಿಯಾದ ಕೋರ್ಟಿಸಾನ್ ಸೇವನೆಯಿಂದ ಆಕೆಯ ಹೃದಯ ದುರ್ಬಲವಾಯಿತು. ಆಕೆಯ ದಿನಚರಿಯಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಶಕ್ತಿ ಹೀನತೆಯ ಬಗ್ಗೆ ಬರೆದಿದ್ದಾರೆ. ಎದೆಯ ಎಡಭಾಗದಲ್ಲಿ ನೋವು ಮತ್ತು ಪದೇ ಪದೇ ಬರುತ್ತಿದ್ದ ವಿಸ್ಮೃತಿ. ಆಕೆಗೆ ಎರಡು ಸಾರಿ ಅಪಾಯಕಾರಿ ರೀತಿಯಲ್ಲಿ ಕಾಯಿಲೆ ಉಲ್ಬಣವಾಗಿದ್ದು ಅವರ ದಿನಚರಿಯಿಂದ ತಿಳಿದು ಬರುತ್ತದೆ. ಈಗ ನೋಡಿದರೆ ಅದು ಇನ್ನೇನೂ ಆಗಿರದೆ ಹೃದಯಾಘಾತವಾಗಿತ್ತು.

ಅಂತಿಮವಾಗಿ ಆಕೆಯ ಅನಾರೋಗ್ಯದ ಗಾಂಭೀರ್ಯವನ್ನು ಮುಚ್ಚಿಡಲಾಗದೆ ಆಕೆಯನ್ನು ಖಾಸಗಿ ಆರೋಗ್ಯಕೇಂದ್ರಕ್ಕೆ ಕಳಿಸಬಹುದೆಂದು ಜೈಲು ಅಧಿಕಾರಿಗಳು ಅಭಿಪ್ರಾಯ ಪಟ್ಟರು. ಆದರೆ ಆಕೆ ಮೃತ್ಯುಮುಖಳಾದ ಚಿನ್ಹೆಗಳು ಕಂಡಾಗ ಪರೋಲ್ ಮೇಲೆ ಆಕೆಯನ್ನು ಬಿಡುಗಡೆ ಮಾಡುವ ನಿರ್ಧಾರ ಕೈಗೊಳ್ಳಲಾಯಿತು.

ಕುಟುಂಬದವರು ಸತತವಾಗಿ ಆಕೆಯನ್ನು ಆಸ್ಪತ್ರೆಗೆ ಸೇರಿಸಲು ಇಲ್ಲವೇ ವೈದ್ಯಕೀಯ ಚಿಕಿತ್ಸೆ ಒದಗಿಸಲು ಸರ್ಕಾರದೊಡನೆ ಹೆಣಗಾಡುತ್ತಿದ್ದಾಗ ಪರೋಲ್ ಸಿಕ್ಕಿದ್ದು ನೋಡಿ ತಾವು ಯಶಸ್ವಿಯಾದೆವೆಂದು ಭಾವಿಸಿದರು. ಆಕೆಯ ಅನಾರೋಗ್ಯಕ್ಕೆ ಸಂಬಂಧ ಪಟ್ಟ ದಾಖಲೆಗಳನ್ನು ಮನೆಯವರಿಗೆ ಕೊಡಲಿಲ್ಲ. ಆಕೆ ಎಷ್ಟು ಗಂಭೀರ ಸ್ಥಿತಿಯಲ್ಲಿ ನರಳಿದ್ದಳು. ಅವಳ ಹೃದಯದ ಸ್ಥಿತಿ ಹೇಗಿತ್ತು ಎನ್ನುವುದರ ಬಗ್ಗೆ ಕುಟುಂಬದವರಿಗೆ ಯಾರೂ ಹೇಳಿರಲಿಲ್ಲ. ಸ್ನೇಹಲತಾ ತನ್ನ ವೈಯಕ್ತಿಕ ಕಷ್ಟದ ಬಗ್ಗೆ ಒಂದು ಶಬ್ದ ಕೂಡ ಹೇಳಲಿಲ್ಲ.

ಪರೋಲ್ ಸಿಕ್ಕಾಗ ಆಕೆಯನ್ನು ಮನೆಗೆ ಕರೆದುಕೊಂಡು ಹೋಗಲು ಬಂದಾಗ ಆಕೆ ಅವರೊಡನೆ ಹೋಗಲು ಒಪ್ಪಲಿಲ್ಲ. ತಾನು ನಿರಪರಾಧಿಯಾಗಿರುವುದರಿಂದ ತನ್ನನ್ನು ಬಂಧನದಿಂದ ಬಿಡುಗಡೆ ಮಾಡಬೇಕು. ಪರೋಲ್ ಕೊಡುವುದಿಲ್ಲವೆಂದು

ಪಾದಿಸಿದರು. ತುಂಬಾ ಕಷ್ಟದಿಂದ ಕುಟುಂಬದವರು ಅವರನ್ನು ಒಲಿಸಿಕೊಂಡರು. ವಿನಾಶಕಾರಿ ವಾತಾವರಣದಿಂದ ಅವರನ್ನು ಹೊರಗೆ ಕರೆದುಕೊಂಡು ಬರಬೇಕಾಯಿತು.

ತಾನು ಜೈಲಿನಲ್ಲಿ ಕಳೆದ ಭೀತಿಯ, ಕಳವಳದ ಕ್ಷಣಗಳು, ನೀಳವಾದ ಏಕಾಂತದ ರಾತ್ರಿಗಳು, ಅಸ್ಪಷ್ಟವಾದ ಅಟ್ಯಾಕ್‌ಗಳ ಬಗ್ಗೆ ಅವರು ಮಾತಾಡಲು ಒಪ್ಪಲಿಲ್ಲ. ಅವರನ್ನು ಸದಾ ಬಾಧಿಸುತ್ತಿದ್ದ ವಿಷಯವೆಂದರೆ ಸ್ತ್ರೀ ಅಪರಾಧಿಗಳನ್ನು ಮುಖ್ಯವಾಗಿ ಸೂಳೆಯರನ್ನು ಜೈಲಿನಲ್ಲಿ ನಡೆಸಿಕೊಳ್ಳುತ್ತಿದ್ದ ರೀತಿ. ಸ್ನೇಹಲತಾ ಜೈಲಿನಲ್ಲಿದ್ದಾಗ ಅವರಿಗೆ ಹಾಡು, ಆಟಗಳನ್ನು ಹೇಳಿಕೊಡುತ್ತಿದ್ದರು. ಅವರ ಎದೆಗಾರಿಕೆಯನ್ನು ಮೆಚ್ಚಿದ್ದರು. ಸದಾಕಾಲ ಜೈಲು ಅಧಿಕಾರಿಗಳ ಜೊತೆ ಅವರಿಗಾಗಿ ಹೋರಾಟ ನಡೆಸಿದರು. ತನ್ನ ಕ್ಷೇಮ ಚಿಂತನೆಗಿಂತ ಅವರ ಹಿತ ರಕ್ಷಣೆಯೇ ಸ್ನೇಹಲತಾರ ಗೀಳಾಗಿತ್ತು.

ಅವರ ದುಃಸ್ವಪ್ನದ ದಿನಗಳಿನ್ನೂ ಮುಗಿದಿರಲಿಲ್ಲ. ಕೆಲವು ದಿನಗಳ ಕಾಲ ಮನೆಯ ಸಿಹಿವಾತಾವರಣದಲ್ಲಿ ಸ್ವಾತಂತ್ರ್ಯ ಅನುಭವಿಸಿದರು. ಆದರೆ ಇನ್ನೂ ಬಿಡುಗಡೆಯಾಗಿರಲಿಲ್ಲ. ಪರೋಲ್ ದಿನಗಳು ಮುಗಿಯುತ್ತಾ ಬಂದಿದ್ದವು. ಪರೋಲ್‌ನ್ನು ಮುಂದುವರೆಸಲು ಮಾಡಿದ ಕೋರಿಕೆಗಳಿಗೆ ಉತ್ತರಗಳೇ ಬರಲಿಲ್ಲ. ಸ್ನೇಹಲತಾರಲ್ಲಿ ನಿಧಾನವಾಗಿ ಒಂದು ಬಗೆಯ ಖಿನ್ನತೆ ಕಂಡು ಬಂತು. ಅವರು ಜೈಲಿಗೆ ಹಿಂದಿರುಗಲು ಸಿದ್ಧತೆ ಮಾಡಿಕೊಳ್ಳತೊಡಗಿದರು. ಭೀತಿ ಸ್ನೇಹಲತಾರನ್ನು ಆವರಿಸಿತು. ಕಣ್ಣುಗಳಲ್ಲಿ ದುಃಖ ಮತ್ತು ನೋವಿನ ಛಾಯೆ ಹರಡಿತು.

ಜೈಲಿಗೆ ಹೊರಡುವ ಹಿಂದಿನ ದಿನ ಅಂತೂ ಕೊನೆಗೆ ವಿಮೋಚನೆ ಸಿಕ್ಕಿತು. ಇನ್ನೊಬ್ಬ ಮೀಸಾ ಖೈದಿ, ಆಗತಾನೇ ಬಿಡುಗಡೆಯಾಗಿ ಬಂದವರು, ಸ್ನೇಹಲತಾರ ಬಿಡುಗಡೆಯ ಸುದ್ದಿಯನ್ನು ತಿಳಿಸಿದರು.

ಹಲವಾರು ತಿಂಗಳುಗಳ ನಂತರ ಸ್ನೇಹಲತಾ ಮೊದಲಬಾರಿಗೆ ಸಂಪೂರ್ಣವಾಗಿ ಸ್ವತಂತ್ರರಾದರು. ಅವರು ತನ್ನ ಸ್ವಾತಂತ್ರ್ಯದ ಪ್ರತಿ ನಿಮಿಷವನ್ನೂ ತಾನು ಪ್ರೀತಿಸಿದ ಕಾರ್ಯಗಳನ್ನು ಮಾಡಲು ಉಪಯೋಗಿಸಿಕೊಂಡರು. ಆಕೆಯ ಉದ್ವಿಗ್ನಮಯ ಸಂತೋಷದಲ್ಲಿ ಕುಟುಂಬದ ಇತರರೂ ಪಾಲುದಾರರಾದರು. ಸ್ನೇಹಲತಾ ಆಗಲೇ ಒಬ್ಬ ಹೃದ್ರೋಗಿಯಾಗಿದ್ದಾರೆ, ಅವರಿಗೆ ವಿಶ್ರಾಂತಿ ಅಗತ್ಯ ಅನ್ನುವುದು ಯಾರಿಗೂ ತಿಳಿದಿರಲಿಲ್ಲ. ಅವರ ಬಿಡುಗಡೆಯಾದ ಐದು ದಿನಗಳ ನಂತರ ಒಮ್ಮೆ ತುಂಬಾ ಗಂಭೀರವಾದ ಹೃದಯಾಘಾತದಿಂದ ಜನವರಿ 20 ರಂದು ಸ್ನೇಹಲತಾ ಮರಣ ಹೊಂದಿದರು.

# APPENDIX I

ಸ್ನೇಹಲತಾರವರು ಜೈಲಿನಿಂದ ವಾಪಾಸು ಬಂದ ಮೇಲೆ ಸದಾಕಾಲವು ಜೈಲಿನಲ್ಲಿ ತನ್ನ ಜೊತೆಗಿದ್ದ ಸಿ. ವರ್ಗದ ಖೈದಿಗಳ ಬಗ್ಗೆ ಚಿಂತಿಸುತ್ತಿದ್ದರು. ಅವರನ್ನು ನೋಡಲು ಬಂದ ಸ್ನೇಹಿತರಿಗೆಲ್ಲ ತನ್ನ ಬಗ್ಗೆ ಏನೂ ಹೇಳಿಕೊಳ್ಳದೇ ಸಿ. ವರ್ಗದ ಖೈದಿಗಳ ದುಃಸ್ಥಿತಿಯ ಬಗ್ಗೆ ಮಾತಾಡುತ್ತಿದ್ದರು. ಜೈಲಿನಲ್ಲಿ ಈ ಸ್ತ್ರೀ ಖೈದಿಗಳನ್ನು ನಡೆಸಿಕೊಳ್ಳುತ್ತಿದ್ದ ರೀತಿಯ ಬಗ್ಗೆ ಬರೆದು ಪ್ರಕಟಿಸಬೇಕೆಂದು ಯೋಚಿಸಿದ್ದರು. ಆದರೆ ಅದನ್ನು ಕಾರ್ಯಗತಗೊಳಿಸುವ ಮೊದಲೇ ಅವರು ಮೃತರಾದರು. ಜೈಲಿನಲ್ಲಿ ತನ್ನೊಡನಿದ್ದ ಇತರ ಖೈದಿಗಳ ಬಗ್ಗೆ ಸ್ನೇಹಲತಾರವರು ಬರೆದಿರುವುದು ತುಂಬಾ ಸಂಕ್ಷಿಪ್ತವಾಗಿದೆ. ಆದರೆ ಸೆಂಟ್ರಲ್ ಜೈಲಿನೊಳಗೆ ಅವರು ಬದುಕುತ್ತಿರುವ ವಿಧಾನದ ಬಗ್ಗೆ ಅದು ಸಾಕಷ್ಟು ಬೆಳಕು ಚೆಲ್ಲುತ್ತದೆ.

1. ಈ ಯುವತಿಯರ ಕರುಣಾಜನಕ ಕತೆಗಳನ್ನು ಕೇಳಿದಾಗ ನನಗೆ ಮತ್ತು ಎಂ. ಎಸ್. ಗೆ ಜೈಲಿನವರು ಮಾಡಿರುವ ಅನ್ಯಾಯದ ಬಗ್ಗೆ ಯೋಚಿಸಲು ಮನಸ್ಸು ಬರುವುದಿಲ್ಲ. ಪಾಪ, ಈ ಹುಡುಗಿಯರಿಗೆ ಏನೂ ಗೊತ್ತಿಲ್ಲ. ಬಹಳ ಸುಲಭವಾಗಿ ಮೋಸ ಹೋಗಿ ಬಿಡುತ್ತಾರೆ. ಇವರನ್ನು ಉಪಯೋಗಿಸುವ ಗಂಡಸರಿಂದ ಮಾತ್ರವಲ್ಲ, ಪೋಲೀಸರಿಂದ ಕೂಡ. ಕಾನೂನುಗಳು, ಇವರಲ್ಲಿ ಭಯೋತ್ಪಾದನೆ ಮಾಡುತ್ತವೆ. ಶಿಕ್ಷೆಗೆ ಗುರಿಪಡಿಸುವ ಪೋಲೀಸರು ಇವರನ್ನು ಮೂಕ ಪ್ರಾಣಿಗಳನ್ನಾಗಿ ಮಾಡಿಬಿಡುತ್ತಾರೆ. ಇವರ ಗೋಳಿನ ಕತೆ ಕೇಳಿದಾಗ ಮನಸ್ಸು ನೋವಿನಿಂದ ನರಳುತ್ತದೆ.

2. ನೂರ್‌ಜಹಾನ್‌ಗೆ 21 ವರ್ಷ ವಯಸ್ಸು. ನಾಲ್ಕು ವರ್ಷದ ಮಗು ಕೂಡ ಇದೆ. ಒಂದು ದಿನ ತನ್ನ ಚಿಕ್ಕ ಮಗಳು ಮತ್ತು 12 ವರ್ಷದ ತನ್ನ ತಮ್ಮನ ಜೊತೆ ಸಿನಿಮಾಕ್ಕೆ ಹೋದಳು. ಪೋಲೀಸರು ಬಂದು ‘ ಸ್ಟೇಷನ್‌ಗೆ ಬಾ ’ ಎಂದರು ‘ ನಾನ್ಯಾಕೆ ಬರಬೇಕು ? ’ ಎಂದು ವಿರೋಧಿಸಿದಳು. ‘ ನೀನು ಗಿರಾಕಿಗಳನ್ನು ಹುಡುಕುತ್ತಿದ್ದದ್ದು ನೋಡಿದ್ದೇವೆ ನಾವು ’ ಅಂದರು. ‘ ಅದು ಸುಳ್ಳು ’ ಅಂದಳು. ಪೋಲಿಸ್ ವ್ಯಾನ್‌ಗೆ ಕರೆದುಕೊಂಡು ಹೋಗಿ 150 ರೂ. ಕೊಡು ಅಂದರು. ಆಕೆ ತನ್ನ ಹತ್ತಿರ 25 ರೂ. ಮಾತ್ರ ಇದೆ ಅಂದಳು. ‘ಹಾಗಾದರೆ ಕೋರ್ಟಿಗೆ ಹೋಗು’ ಅಂತ ಅವಳ ವಿರುದ್ಧ ಕೇಸ್ ಹಾಕಿದರು. ಒಂದು ಸಾರಿ ಸೂಳೆಗಾರಿಕೆಯ ಕಾರಣಕ್ಕಾಗಿ ಜೈಲಿಗೆ ಬಂದು ವಾಪಾಸು ಹೋದರೆ ಸಾಕು, ಅವರನ್ನು ಪದೇ ಪದೇ ನಿಷ್ಕಾರಣವಾಗಿ ಹಿಡಿಯುತ್ತಾರೆ. ಅವರೆಲ್ಲೂ ಹೋಗೋ ಹಾಗಿಲ್ಲ. ಸಿನಿಮಾ ನೋಡೋ ಹಾಗಿಲ್ಲ.

3. 24 ವರ್ಷದ ಜುಲೇಖಾಗೆ ತಾಯಿ–ತಂದೆ ಇದ್ದಾರೆ. ತಂದೆ ಇನ್ನೊಂದು ಮದುವೆಯಾಗಿದ್ದಾನೆ. ಅವನು ಹೆಂಡತಿಗೆ ಹೊಡೆಯುತ್ತಾನೆ. ಹಿಂಸೆ ಕೊಡುತ್ತಾನೆ. ಆಕೆಯ ಮಲತಾಯಿ ಬಹಳ ಕ್ರೂರಿ. ಆದ್ದರಿಂದ ಬೆಂಗಳೂರಿಗೆ ಓಡಿ ಬಂದಳು. ಒಬ್ಬ ಗಂಡಸು ಸಿಕ್ಕಿದ. ಅವನ ಜೊತೆಗೆ ಬದುಕೋದಕ್ಕೆ ಪ್ರಾರಂಭಿಸಿದಳು. ತುಂಬಾ ಕಷ್ಟದಲ್ಲಿದ್ದ ಅವಳ ತಾಯಿ ಕೂಡ ಇವಳ ಜೊತೆಗೆ ಬಂದು ಇರಲು ಪ್ರಾರಂಭಿಸಿದಳು. ಆಕೆಗೆ ಕಾಯಿಲೆ. ಕೆಲಸ ಮಾಡಲು ಶಕ್ತಿ ಇಲ್ಲ. ಕಳೆದ ಏಳು ವರ್ಷಗಳಿಂದಲೂ ಮಗಳ ಜೊತೆಗೇ ಇದ್ದಾಳೆ. ಒಮ್ಮೆ ಸೂಳೆಗಾರಿಕೆ ಮಾಡುವಾಗ ಪೋಲೀಸರ ಕೈಗೆ ಸಿಕ್ಕಿಬಿದ್ದಳು. ರಾಜಾಜಿನಗರ ಪೋಲಿಸ್ ಸ್ಟೇಷನ್‌ಗೆ ಕರೆದುಕೊಂಡು ಹೋದರು. ಅಲ್ಲಿ ಆಕೆಗೆ ಚೆನ್ನಾಗಿ ಹೊಡೆದರು, ದುಡ್ಡು ಕೇಳಿದರು. ದುಡ್ಡಿರದಿದ್ದರಿಂದ ಜೈಲಿಗೆ ಹಾಕಿದರು. ಒಂದು ತಿಂಗಳಿಂದ ಜೈಲಿನಲ್ಲಿದ್ದಾಳೆ.

P. S. ಇಂಥಾ ಬೇಕಾದಷ್ಟು ಇತರ ಬಲಿಪಶುಗಳು ಜೈಲಿನಲ್ಲಿದ್ದರು. ಸ್ನೇಹಲತಾ ಅವರೆಲ್ಲರ ಜೊತೆ ಸ್ನೇಹ ಮಾಡಿದಳು. ಇವರ ವಿಚಾರ ಹೊರಗಿರುವ ನಮಗೆಂದೂ ತಿಳಿಯುವುದಿಲ್ಲ. ಅಲ್ಲಿರುವ ಸೂಳೆಯರು, ಕೊಲೆಗಡುಕರು ಮತ್ತು ಇತರ ಅಪರಾಧಿಗಳ ಸ್ಥಿತಿ ಜೈಲಿನಲ್ಲಿ ಹೇಗಿತ್ತು ಎಂಬುದನ್ನು ಕೆಳಗಿನಂತೆ ಸ್ನೇಹಲತಾ ವಿವರಿಸುತ್ತಾರೆ.

4. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಹೆಂಗಸರನ್ನು ಅಮಾನುಷ ರೀತಿಯಲ್ಲಿ ನೋಡಿಕೊಳ್ಳುತ್ತಾರೆ. ಇಲ್ಲಿ ಗಂಡಸರಿಗೆ ಆದ್ಯತೆಯಿದೆ. ಹೆಂಗಸರನ್ನು ನಿಕೃಷ್ಟವಾಗಿ ನೋಡಿಕೊಳ್ಳುತ್ತಾರೆ.

(ಎ) ಎಲ್ಲಾ ಸ್ತ್ರೀ ಖೈದಿಗಳೂ ದಿನವೆಲ್ಲ ರಾಗಿ, ಅಕ್ಕಿ ಶುಚಿಗೊಳಿಸುವ ಕೆಲಸ ಮಾಡುತ್ತಾರೆ—ಊಟದ ವೇಳೆಯೊಂದನ್ನು ಬಿಟ್ಟು. ಉಳಿದ ಕಾಲದಲ್ಲಿ ನೀರು ಹೊರುವುದು, ಕೊಠಡಿಗಳನ್ನು ಗುಡಿಸಿ ಒರೆಸುವ ಕೆಲಸ. ಬೇರೇನೂ ಇಲ್ಲ.

(ಬಿ) ಯಾವ ಬಗೆಯ ವೈವಿಧ್ಯವೂ ಇರದ ಅನಾರೋಗ್ಯಕರ ಆಹಾರ ಕೊಡುತ್ತಾರೆ. ಶೇಕಡ 100 ರಷ್ಟು ಗಂಜಿ ಇರುತ್ತದೆ. ಅವರ ಆಹಾರದಲ್ಲಿ ಪ್ರೋಟೀನ್ ಇಲ್ಲ, ಖನಿಜಾಂಶಗಳಿಲ್ಲ, ಹಣ್ಣುಗಳಿಲ್ಲ, ಹಸಿರು ತರಕಾರಿಗಳಿಲ್ಲ—ಸಿಹಿಯ ಮಾತಂತೂ ಕೇಳುವುದೇ ಬೇಡ. ಕಾಫಿ–ಟೀ ಕೂಡ ಇಲ್ಲ. ಬರೀ ಗಂಜಿ. ಗಂಜಿ ಒಳ್ಳೆಯದೇ, ಆದರೆ ಬೇರಾವ ಪೌಷ್ಟಿಕಾಹಾರವೂ ಇಲ್ಲವಲ್ಲ.

(ಸಿ) ನಿರ್ದಿಷ್ಟ ಕಾಲದಲ್ಲಿ ಮಾತ್ರ ಹೆಂಗಸರಿಗೆ ಕುಡಿಯುವುದಕ್ಕೆ, ಸ್ನಾನ

ಮಾತುವುದಕ್ಕೆ ನೀರು ದೊರೆಯುತ್ತದೆ. ಜೈಲಿನಲ್ಲಿ ನಲ್ಲಿಗಳನ್ನೇಕೆ ಹಾಕಿಲ್ಲ? ಬೆಂಗಳೂರಿನಲ್ಲಿ ನೀರಿನ ಅಭಾವವೇನಿಲ್ಲ. ಅದೂ ಅಲ್ಲದೇ ಸ್ನಾನ ಮಾಡುವುದಕ್ಕೆ, ಕುಡಿಯುವುದಕ್ಕೆ ಬಾವಿ ನೀರನ್ನು ಕೊಡುತ್ತಾರೆ. ಪರಿಣಾಮವಾಗಿ ನನಗೆ ಒಂದು ಬಗೆಯ ತುರಿ ಪ್ರಾರಂಭವಾಗಿದೆ.

(ಡಿ) ಹೆಂಗಸರು ಕೊಠಡಿಯ ಹೊರಗೆ ಹೋಗಲು ಅವಕಾಶವಿಲ್ಲ. ಇಲ್ಲಿ ಒಂದು ಮರವಿಲ್ಲ, ಒಂದಿಷ್ಟು ಹುಲ್ಲಿಲ್ಲ. ಅವರನ್ನೇಕೆ ಜೈಲಿನ ತೋಟದಲ್ಲಿ ಓಡಾಡಲು ಬಿಡಬಾರದು? ಈ ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿಯೂ ಗಂಡಸರಿಗಿಂತ ಕಳಪೆಯಾಗಿ ಹೆಂಗಸರನ್ನೇಕೆ ನೋಡಿಕೊಳ್ಳಬೇಕು? ಅವರೂ ಮನುಷ್ಯ ಜೀವಿಗಳಲ್ಲವೇ?

(ಇ) ಯಾವುದೇ ಬಗೆಯ ಮನೋರಂಜನೆಯಿಲ್ಲ. ಅವರನ್ನು ಪ್ರಾಣಿಗಳಂತೆ ನೋಡಿಕೊಳ್ಳಲಾಗುತ್ತಿದೆ. ನಿರ್ದಿಷ್ಟ ಕಾಲದಲ್ಲಿ ಕೊಟ್ಟಿಗೆಯಿಂದ ಹೊರಗೆ ಬಿಡುತ್ತಾರೆ. ನಂತರ ಒಳಗೆ ಕೂಡಿ ಬೀಗ ಹಾಕುತ್ತಾರೆ. "ಹೊರಗೆ" ಅಂದರೆ ಅವರ ಕೊಠಡಿಯ ಎದುರು 10 ಅಡಿ ಅಗಲದ ಜಗಲಿ ಇದೆ ಅಷ್ಟೆ. ಜೈಲಿಗೆ ಹೊಸದಾಗಿ ಸ್ತ್ರೀ ಖೈದಿಯೊಬ್ಬಳು ಬಂದ ತಕ್ಷಣ ಬೇರೆಲ್ಲ ಹೆಂಗಸರ ಎದುರು ಅವಳನ್ನು ಬತ್ತಲು ಮಾಡುತ್ತಾರೆ.

ಒಂದು ವ್ಯಕ್ತಿ ತಪ್ಪು ಮಾಡಿದಾಗ ವಿಧಿಸುವ ಶಿಕ್ಷೆ ಸಾಲದೇ? ಆ ಮನುಷ್ಯನ–ಗಂಡಸಿನದಾಗಲಿ, ಹೆಂಗಸಿನದಾಗಲಿ—ದೇಹವನ್ನು ಕೂಡ ನಿಕೃಷ್ಟವಾಗಿ ಕಂಡು ಅವಮಾನ ಮಾಡಬೇಕೇ? ಈ ವಕ್ರ ಕ್ರಮಗಳಿಗೆ ಯಾರು ಜವಾಬ್ದಾರರು. ಜೈಲಿನ ಉನ್ನತ ಅಧಿಕಾರಿಗಳು, ಐ.ಜಿ.ಗಳು ಇಲ್ಲಿನ ಸ್ಥಿತಿ. ಗತಿಗಳನ್ನು ಸುಧಾರಿಸುವುದಕ್ಕೆ ಪ್ರಯತ್ನಿಸಬಾರದೆ? ಈ ಮನುಷ್ಯ ಜನ್ಮ ಪಡೆದು ಹುಟ್ಟಿದ್ದರ ಸಾರ್ಥಕವೇನು? ಪರಿಪೂರ್ಣತೆಯತ್ತ ಈ ಮಾನವ ಜನಾಂಗವನ್ನು ಕರೆದೊಯ್ಯುವುದಲ್ಲವೇ? ಜೀವನದ ಯಾವ ಕ್ಷೇತ್ರದಲ್ಲಿ ಒಬ್ಬ ಮನುಷ್ಯನಿದ್ದಾನೆ ಅನ್ನುವುದು ಮುಖ್ಯವಲ್ಲ, ಅವನ ಜೀವನದ ಕರ್ತವ್ಯಗಳಲ್ಲಿ ಮನುಷ್ಯನ ಭಾವನೆಗಳನ್ನು, ವಿಚಾರಗಳನ್ನು ಉತ್ತಮಪಡಿಸುವುದೂ ಒಂದು. ಇದಕ್ಕಾಗಿ ಎಲ್ಲಾ ವಿಧದಲ್ಲಿಯೂ ಪ್ರಯತ್ನಿಸಬೇಕು.

**ಜೂನ್ 9**

ಸ್ವಲ್ಪವಾದರೂ, ನಾನು ಇಲ್ಲಿ ಸಾರ್ಥಕವಾದ ಕೆಲಸ ಮಾಡಿದ್ದೇನೆ. ಸ್ತ್ರೀ ಖೈದಿಗಳಿಗೆ ಅಧಿಕಾರಿಗಳು ಹೊಡೆಯುತ್ತಿದ್ದ ಕ್ರೂರ ಪದ್ಧತಿಯನ್ನು ನಿಲ್ಲಿಸುವುದರಲ್ಲಿ ಯಶಸ್ವಿಯಾಗಿದ್ದೇನೆ. ಅವರಿಗೆ ದೊರಕುತ್ತಿದ್ದ ಆಹಾರದ ಗುಣಮಟ್ಟ ಸುಧಾರಿಸಿದೆ. ನಲ್ಲಿ ನೀರನ್ನು ದೊರಕಿಸಲು ಪ್ರಯತ್ನಿಸಿದ್ದಕ್ಕೆ ನನಗೆ ಆಶಾದಾಯಕ ಭರವಸೆಗಳು

ಸಿಕ್ಕವೆ. ಇವೆಲ್ಲಕ್ಕಿಂತ ಮುಖ್ಯವಾಗಿ ಸ್ತ್ರೀ ಖೈದಿಗಳನ್ನು ಸ್ವಲ್ಪ ಮಟ್ಟಿಗಾದರೂ ನಿರ್ಭೀತರನ್ನಾಗಿಸಿದ್ದೇನೆ!

ಈಗ ಅವರು ಮೊದಲು ಮಾಡುತ್ತಿದ್ದ ಅರ್ಧದಷ್ಟು ಕಾಲ ಮಾತ್ರ ಅಕ್ಕಿ, ರಾಗಿ ಶುಚಿ ಮಾಡುತ್ತಾರೆ. ಅವರಿಗೆ ಆಟ ಆಡೋದಕ್ಕೆ ಉತ್ತೇಜನ ಕೊಟ್ಟಿದ್ದೇನೆ. ಮಧ್ಯಾಹ್ನದ ನಂತರ ಬೇಕಾದಷ್ಟು ಹೊತ್ತು ಆಟ ಆಡ್ತಾರೆ. ಸ್ತ್ರೀ ಖೈದಿಗಳ ಆಹಾರದ ಗುಣಮಟ್ಟ ಉತ್ತಮಪಡಿಸದ ಹೊರತು ನಾನು ಊಟ ಮಾಡುವುದಿಲ್ಲವೆಂದು 9 ದಿನಗಳ ಕಾಲ ಅನ್ನ ಸತ್ಯಾಗ್ರಹ ಹೂಡಿದೆ. ಅದರ ಫಲವಾಗಿ ಅವರ ಆಹಾರದ ಗುಣಮಟ್ಟ ಸ್ವಲ್ಪ ಉತ್ತಮವಾಯಿತು.

**ಟಿಪ್ಪಣಿ:** ಅಲ್ಲಿದ್ದ ಬಹಳಷ್ಟು ಜನ ಸ್ತ್ರೀಯರಿಗೆ ಅಕ್ಷರ ಜ್ಞಾನವೇ ಇರಲಿಲ್ಲ. ಅವರೆಲ್ಲರಿಗೂ ಓದುವುದಕ್ಕೆ ಬರೆಯುವುದಕ್ಕೆ ಹೇಳಿಕೊಡಲು ಸ್ನೇಹ ಪ್ರಯತ್ನಿಸಿದರು. ಅವರಿಗಾಗಿ ನಾಟಕ ಸ್ಪರ್ಧೆಯನ್ನು ಜೈಲಿನೊಳಗಡೆಯೇ ಏರ್ಪಡಿಸಿದರು. ಶೋಷಿತ ಸ್ತ್ರೀ ಖೈದಿಗಳ ಪರವಾಗಿ ಜೈಲು ಅಧಿಕಾರಿಗಳೊಂದಿಗೆ ಚರ್ಚೆ ನಡೆಸುತ್ತಿದ್ದರು. ಜೈಲಿನಲ್ಲಿ ಒಬ್ಬ ಗರ್ಭಿಣಿ ಖೈದಿ ಇದ್ದಳು. ಅವಳನ್ನು ಸಕಾಲದಲ್ಲಿಯೇ ಆಸ್ಪತ್ರೆಗೆ ಸೇರಿಸಬೇಕೆಂದು ಸ್ನೇಹ ಜೈಲು ಅಧಿಕಾರಿಗಳನ್ನು ಕೇಳಿಕೊಂಡರು. ಆದರೆ ಜೈಲು ಅಧಿಕಾರಿಗಳು ಆಕೆಯನ್ನು ಆಸ್ಪತ್ರೆಗೆ ಸೇರಿಸುವುದಕ್ಕೆ ಇನ್ನೂ ಕಾಲಾವಕಾಶವಿದೆಯೆಂದು ವಾದಿಸಿದರು. ಈ ಹೆಂಗಸು ಜೈಲಿನಲ್ಲಿಯೇ ಪ್ರಸವ ಬಾಧೆಗೆ ಒಳಗಾಗಿ ವೈದ್ಯಕೀಯ ನೆರವು ಇರದೇ ವಿಪರೀತ ರಕ್ತಸ್ರಾವದಿಂದ ನರಳಬೇಕಾಯಿತು. ಸ್ನೇಹ ಮತ್ತೊಮ್ಮೆ ಜೈಲು ಅಧಿಕಾರಿಗಳನ್ನು ಆಗ್ರಹಪೂರ್ವಕವಾಗಿ ಬೇಡಿಕೊಂಡಾಗ ತಾಯಿ–ಮಗುವನ್ನು ಆಸ್ಪತ್ರೆಗೆ ಸೇರಿಸಿದರು. ಇಂಥ ಸಂದರ್ಭಗಳಲ್ಲಿ ಜೈಲು ಅಧಿಕಾರಿಗಳ ನಿರ್ಲಕ್ಷ್ಯ ಮತ್ತು ಖೈದಿಗಳ ಅಜ್ಞಾನದ ಪರಿಣಾಮ ಏನಾಗಬಹುದೆಂಬುದನ್ನು ಊಹಿಸುವುದು ಕಷ್ಟ. ತಾಯಿ ಮತ್ತು ಮಗು ಆಸ್ಪತ್ರೆಯಿಂದ ಬಂದ ಮೇಲೆ ವಿವಿಧ ರೀತಿಯ ಅಂಟು ಜಾಡ್ಯವಿರುವ ಖೈದಿಗಳ ಜೊತೆಗೆ ಬದುಕಬೇಕಾಯಿತು. ಸ್ನೇಹ ಪುನಃ ಹೋರಾಡಿ ತಾಯಿ–ಮಗುವಿಗೆ ಪ್ರತ್ಯೇಕವಾದ ಕೊಠಡಿಯೊಂದನ್ನು ದೊರಕಿಸಿಕೊಟ್ಟರು. ಮಗುವಿಗಾಗಿ ತನ್ನ ಸ್ವಂತ ಖರ್ಚಿನಿಂದ ಹಾಲಿನಪುಡಿ ಒದಗಿಸಿದಳು. ಜೈಲು ಅಧಿಕಾರಿಗಳು, "ಅಂಥ ಮಕ್ಕಳಿಗೆಲ್ಲಾ ಹಾಲಿನ ಪುಡಿ ಯಾಕೆ, ಅವುಗಳ ಸ್ಥಾನಮಾನಕ್ಕೆ ಹೆಚ್ಚೆಂದು" ಕಿತ್ತುಕೊಂಡು ಹೋದರು. ಯಾವ ಖೈದಿಯ ಬಗ್ಗಾದರೂ ಸ್ನೇಹ ವಿಶೇಷ ಆಸಕ್ತಿಯಿಂದ ಅಧಿಕಾರಿಗಳ ಜೊತೆ ಹೋರಾಡಿದರೆ, ನಂತರ ಆ ನಿರ್ದಿಷ್ಟ ಖೈದಿಯನ್ನು ತುಂಬಾ ಕೆಟ್ಟದ್ದಾಗಿ ನೋಡಿಕೊಳ್ಳುತ್ತಾರೆ ಎಂಬುದು ಸ್ನೇಹಾಗೆ ಅನುಭವವಾಯಿತು.

ಜೈಲಿನೊಳಗಡೆ ವಾರ್ಡರ್‌ಗೆ ಅತ್ಯಂತ ಪ್ರಮುಖ ಅಧಿಕಾರದಿಂದಾಗಿ ಸ್ತ್ರೀ ಖೈದಿ

ಗಳನ್ನು ಅದೂ ಆಕೆಯನ್ನು ಎದುರು ಹಾಕಿಕೊಂಡವರನ್ನು ತುಂಬಾ ಕ್ರೂರವಾಗಿ ನೋಡಿಕೊಳ್ಳುತ್ತಾಳೆ. ವಾರ್ಡರ್‌ನ ಈ ಬಗೆಯ ವರ್ತನೆಯ ಬಗ್ಗೆ ಸ್ನೇಹ ಒಂದು ಅಧಿಕೃತ ತನಿಖೆ ನಡೆಸುವಂತೆ ಮಾಡಲು ಪ್ರಯತ್ನಿಸಿದಳು. ಅದರ ಫಲವನ್ನು ಆಕೆಯ ಶಬ್ದಗಳಲ್ಲೇ ಕೇಳೋಣ.

**ಸೆಪ್ಟೆಂಬರ್ 7 1976**

ಸೋಫಿಯಾ ವಾಪಾಸು ಬಂದಳು. ಆಕೆ ಬೇರೆ ವಾರ್ಡರ್‌ಗಳ ಸಂಗಡವೂ ಕೂಡ ಚೆನ್ನಾಗಿ ನಡೆದುಕೊಳ್ಳುವುದಿಲ್ಲ.

8. ಸೋಫಿಯ ತುಂಬಾ ವಿಚಿತ್ರವಾಗಿ ನಡೆದುಕೊಳ್ಳುತ್ತಿದ್ದಾಳೆ. ಓ ದೇವರೇ ! ಆರ್. ಹತ್ತಿರ ಆಪ್ಪೇಕೆ ಕಿರುಚಾಡುತ್ತಿದ್ದಾಳೆ ! ಅವಳ ರೂಮಿಂಗೆ ಹೋಗ ಬೇಡ ಅನ್ನುತ್ತಿದ್ದಾಳೆ, ಉಳಿದೆಲ್ಲ ಹುಡುಗಿಯರ ಹತ್ತಿರವೂ ಸಿಡುಕಿನಿಂದ ವರ್ತಿಸು ತ್ತಿದ್ದಾಳೆ. ನಿಜವಾಗಿಯೂ, ಈ ಹೆಂಗಸಿಗೆ ಹುಚ್ಚು ಹಿಡಿದಿದೆಯೆ ? ಎರಡು ಹುಡುಗಿ ಯರು ಕಣ್ಣೀರಿಡುತ್ತ ನನ್ನ ಹತ್ತಿರಕ್ಕೆ ಬಂದರು. ನಾನೇನು ಮಾಡಬಲ್ಲೆ ? ದೇಸಾಯಿ ಯವರಿಗೆ ಕಾಗದ ಬರೆದು ಅವಳಿಗೆ ಸ್ವಲ್ಪ ಬುದ್ಧಿ ಹೇಳಿ ಅನ್ನೋಣಾಂತಿದ್ದೇನೆ. ಈಗ ಆಕೆ ತನ್ನ ನಿಜವಾದ ಬಣ್ಣ ತೋರಿಸುತ್ತಿದ್ದಾಳೆ. ಅವಳೇಕೆ ಅಷ್ಟು ಅನ್ಯಾಯ ಮಾಡ್ತಾಳೆ ? ಹಗೆ ತೀರಿಸಿಕೊಳ್ಳೋದಕ್ಕೆ ಪ್ರಯತ್ನಿಸ್ತಾಳೆ ? ದೇಸಾಯಿಗೊಂದು ಕಾಗದ ಬರೆದಿದ್ದೇನೆ.

**ಸೆಪ್ಟೆಂಬರ್ 9**

ಬೆಳಗಿನಿಂದ ಸಂಜೆಯವರೆಗೂ ಕಿರುಚಿದ್ದಾಳೆ. ಹಲವರನ್ನು ಹೆದರಿಸಿದಳು. ಎರಡು ಹುಡುಗಿಯರನ್ನು ಹೊಡೆದಳು : ಒಬ್ಬಳ ತಲೆಯನ್ನು ಗೋಡೆಗೆ ಜಜ್ಜಿದಳು, ಇನ್ನೊಬ್ಬಳ ತಲೆಗೆ ಕೋಲಿನಿಂದ ಹೊಡೆದಳು. ತಲೆಯಲ್ಲೆಲ್ಲಾ ಗಾಯವಾಗಿದೆ. ಆಕೆಗೆ ಯಾವ ಭೂತ ಹಿಡಿದಿದೆ ? ಆಕೆಗೆ ಬೇಕಾದವರನ್ನು ಬಿಟ್ಟು ಉಳಿದವರನ್ನು ಉಳಿದವರ ಮೇಲೆಲ್ಲ ಹರಿ ಹಾಯುತ್ತಾಳೆ, ಹುಡುಕುತ್ತಾಳೆ !

10. ಎಲ್ಲಾ ಹುಡುಗಿಯರೂ ಭೀತರಾಗಿದ್ದಾರೆ. ದೇಸಾಯಿಗೇನಾಗಿದೆ ? ಇದುವರೆಗೂ ಇಲ್ಲಿಗೆ ಬಂದಿಲ್ಲ. ನಾನು ದೂರುಕೊಟ್ಟು ಎರಡು ದಿನಗಳಾದವು.

**ಸೆಪ್ಟೆಂಬರ್ 10**

ಪ್ರಿಯ ಶ್ರೀ. ದೇಸಾಯಿಯವರೇ,

ನಿನ್ನೆ ಮಧ್ಯಾಹ್ನ ನೀವು ನಮ್ಮ ಜೈಲಿಗೆ ಬೇಟಿ ನೀಡಿದ್ದಿರೆಂದು ತಿಳಿದು ಬಂತು

ಇಲ್ಲಿಗೆ ಬಂದಾಗ ನನ್ನನ್ನೇಕೆ ನೋಡಲಿಲ್ಲವೆಂದು ಆಶ್ಚರ್ಯವಾಗಿದೆ.

ನೀವು ತನಿಖೆಗಾಗಿ ಇಲ್ಲಿಗೆ ಬಂದಿದ್ದಿರೆಂದು ನಾನು ನಂಬುತ್ತೇನೆ ನನ್ನ ನಂಬಿಕೆಗಳು ಬಹಳ ಹಳೆಯ ಕಾಲದವೆಂದು ನನಗೀಗ ಅನಿಸುತ್ತಿದೆ. ಯಾಕೆಂದರೆ ತನಿಖೆಗಳು ವಿಚಾರಣೆಗಳು ರಹಸ್ಯವಾಗಿ ಪ್ರತ್ಯೇಕವಾಗಿ ನಡೆಯುತ್ತವೆಂದು ನಾನು ನಂಬಿದ್ದೆ. ಹಿಂಸೆ ಪಟ್ಟವರನ್ನು ಹಿಂಸೆ ಪಡಿಸಿದವರ ಸಮ್ಮುಖದಲ್ಲಿ ಪ್ರಶ್ನಿಸುತ್ತಾರೆನ್ನುವುದು ನಾನು ಇದುವರೆಗೂ ಕೇಳಿಲ್ಲ, ಕಂಡಿಲ್ಲ. ಬಹುಷಃ ಈ ವಿಧಾನಗಳು ಹೊಸದಿರಬಹುದು, ದೆಹಲಿಯಲ್ಲಿ ಪ್ರಾರಂಭಿಸಿರುವುದು. ನೀವದನ್ನು ಇತ್ತೀಚಿನ ತರಬೇತಿಯಲ್ಲಿ ಅಳವಡಿಸಿಕೊಂಡಿರಬೇಕು....ನಿನ್ನೆ ನಡೆದಿದ್ದು ನಿಜವಾದ ತನಿಖೆಯೇ ಆದ ಪಕ್ಷದಲ್ಲಿ ನೀವೊಬ್ಬ ಅಭಿನಯ ಚತುರ, ಅನ್ನುವುದರಲ್ಲಿ ನನಗೆ ಸಂಶಯವಿಲ್ಲ-ನಿಮ್ಮನ್ನು ನನ್ನ ಗಂಡನ ಪತ್ರಿರ ಶಿಫಾರಸು ಮಾಡಬೇಕು. ನಿನ್ನೆ ನಡೆದಿದ್ದು 'ತಮಾಷೆ ತನಿಖೆ'. ಪ್ರತಿಯೊಬ್ಬ ಹುಡುಗಿಯನ್ನೂ ಪ್ರತ್ಯೇಕವಾಗಿ ಕರೆದು ನಿರ್ಭಯವಾದ ವಾತಾವರಣದಲ್ಲಿ ಪ್ರಶ್ನಿಸಿದ್ದರೆ ನಿಜ ತಿಳಿಯುತ್ತಿತ್ತು. ನೀವು ನಿನ್ನೆ ಬಂದಿದ್ದು ಪರಿಸ್ಥಿತಿಯನ್ನು ಅರಿವು ಮಾಡಿಕೊಳ್ಳುವುದಕ್ಕಾಗಿಯೇ ವಿನಾ ನಿಜವಾದ ತನಿಖೆಗಲ್ಲ ಎಂಬುದು ನನ್ನ ಭಾವನೆ—ನಿಜವಾದ ತನಿಖೆ ನೀವು ಇನ್ನೊಮ್ಮೆ ಮಾಡಬಹುದು, ಮಾಡಿಯೇ ಮಾಡುತ್ತೀರೆಂದು ಆಶಿಸುತ್ತೇನೆ. ಸ್ತ್ರೀ ಖೈದಿಗಳಿಗೆ ವಾರ್ಡರ್ ಹೊಡೆದ ಪ್ರಕರಣದ ಬಗ್ಗೆ ನಾನು ದೂರು ಕೊಟ್ಟಿದ್ದೆ. ಆದರ ಬಗ್ಗೆ ತಕ್ಷಣವೇ ತನಿಖೆ ಮಾಡಬೇಕೇ ವಿನಾ ಎರಡು ಮೂರು ದಿನಗಳ ನಂತರವಲ್ಲ—ಅದೂ ನೀವು ನಡೆಸಿದ ತನಿಖೆಯ ರೀತಿಯಲ್ಲಲ್ಲ.

ಶುಭಾಶಯಗಳೊಡನೆ

ಇತಿ ನಿಮ್ಮ

**ಸ್ನೇಹಲತಾ ರೆಡ್ಡಿ**

## APPENDIX II

# WELL TREATED

Sir.- with reference to the letter by Jaya Chandran (Feb. 5). I wish to clarify the arrangements and treatment given to Snehalatha Reddy while she was in the Central Jail, Bangalore as wel! as other detenus under MISA.

Mrs. Reddy was detained from May 7, 1976. She was asthmatic from her childhood. She was seen by physician from Victoria Hospital for the first time on May 18, 1976 after her detention and treatment was prescribed for her complaint. Subsequently on May 20, 26 and June 18, 1976 she was treated by specialists from Victoria Hospital. From Oct. 8, 1976 she was under the treatment of her family physician as desired by her. Government provided the medicines prescribed by her family physician. She was on parole from December 14, 1976, and her detention was revoked on January 13, 1977. During her stay in the prison she was occupying a room 15' x 20' with attached bathroom and toilet facilities. Throughout her stay she was getting food from her home. In addition, she was being provided with milk, bread, sugar, chicken and eggs by the prison authorities as prescribed by the medical authorities. In addition to the treatment in the hospital she was being daily examined by the jail medical staff and the district surgeon.

Detenus under MISA are not subjected to the same kind of prison conditions as convicts. The rules for detention of political prisoners provide for special facilities for food, clothing etc. They are allowed to prepare their own food and also allowed the facility of getting food from their homes which is not the case with convicts. The convicts are put on labour whereas the detenus are not. It is clear that the author of the letter is not aware of these facts.

The conditions in the prisons in our State are not sub-human as made out in the letter. There is a board of non-official visitors for every prison, the function of which is to visit the prison and satisfy themselves about the treatment given to the prison inmates. There is also a State Advisory Board for Prison which met recently and offered suggestions regarding prison administration. A number of schemes are in operation

for the rehabilitation of prisoners after their discharge with ths .help of the probation department in the State.

C. S. MALLAIAH
Inspector General of Prison
Bangalore-
*Indian Express*
February. 11, 1977

# III-Treatment

With reference to the reply of the IG of prisons (Feb. 11) to J. R. Chandran's letter (Feb 5) in your columns concerning the late Mrs. Snehalatha Reddy we hope you will allow us to make the following observations in the interest of truth and justice.

It is good to know from the I. G. prisons himself about the special facilities to which detenus under MISA are eligible, as a'so about the provisions that exist to ensure that the conditions in our State are not sub-human. Far from showing ignorance of these mercies in our penal system, J. R.Chandran's letter, it seems to us, is based on a knowledge of these provi sions, and its burden is that despite these, right here in the capital of our State, people like Mrs. Reddy, and the common women prisoners are denied by the administration what the laws and rules provide for their welfare and protection. We regret having to take issue with Mr. Malliah in this matter because we happen to know that Mrs. Reddy made many written and oral representations to him, that he did try to improve some things, that in fact Mrs. Reddy thought of him well and kindly. However, she also found and recorded that what he could do was limited and that behind his back some of the prison staff seem to be able to do what they please and to

get away with it. So, while Mr. Malliah might be right in what he has said if one went solely by what the laws and rules provide, and by his own considerate instructions, we have it on record that the facts were far from bearing these out in the case of Mrs. Reddy and her fellow prisoners.

It is true Mrs. R. was periodically asthmaitic, but it is also true that prison conditions caused her asthma to become chronic and crippling. She may have had a 15'X20' room, but ventilation was poor and polluted owing to the proximity of a lavatory as well as the constant dust from ragi and rice being cleaned all around her. Her request that this operation at least be shifted elsewhere was not granted. Her room was also leaky and infested with rats and cockroches. Her living conditions were not improved in keeping with her status as a political prisoner : throughout she was kept with C-class prisoners - either by higher direction or because of the callousness of prison authorities.

Again, she did receive some medical attention. In fact she has recorded that 7 different doctors saw her - presumably when she was taken as many times to Victoria Hospital, but her own pleas and the jail doctor's recommendation that she be hospitalised was never granted despite the growing severity and agony of her asthma. Everyone know that this condition in asthma needs immediate help and cannot wait till the next morning. To save the physician trouble, or as an act of perverse consideration, injectibles and a syringe were left with her so that she could inject herself whenever needed. In July she had a near fatal attack with likely heart involvement, and she told Mr. Malliah about it herself. It is true that her family physician was allowed to see her, but this was once only on Oct. 8, nearly three months after she had reached a stage of near collapse. Moreover, this visit was permitted after the doctor was closely qaizzed, first at his clinic and

again for another 30 minutes when he visited the jail. There can be little doubt that inadequate medical help for six months killed Snehalatha Reddy prematurly.

It is true she was getting food from her home but certainly not for the whole period of her detention. Once she had to go on a hunger -strike to wrest this facility from the prison authorities. She has recorded the type of 'rations' she received - which, on occasion, included egg or pieces of raw chicken etc. But dumping these on her was no kindness at all when she was utterly exhausted and in pain because of nightly asthma attacks, and was in no state to do any cooking. As the I. G. says, to prepare her own food was, no doubt, one of the special facilitics she was entitled to as a political prisoner. was it human to expect her to do this in her anxiety ridden and debilitated condition ?

Mrs. Reddy herself has vouched for the fact that Mr. Malliah is a considerate officer, but did he know that for days after Mrs. Reddy complained to him about the Jail Superintendent, she was denied by this functionary all contact with her family - even though about this time her only son was due to go away? Does it take much imagination to see that such a situation of demoralising solitary confinement such as Mrs. Reddy was subjected to needs much more than a 15' x 20' room and occasional pieces of raw chicken to make it human.

We do not intend to contest the I. G.'s recital, in his last paragraph, of all the benevolent provisions to ensure human treatment of prisoners. However, what Mrs. Reddy saw and recorded about the treatment of women prisoners who shared the 'snake - pit' with her prove not their existence but their utter ineffectiveness. The State and its Prison administration will do itself more honour not by merely quoting

acts and rules, but by respecting the outraged public opinion that to day stands aghast at such spectacles of callous inhumanity ostensibly perpetrated to ensure public weal, and by cooperating with it in setting up one more evidence that we are a civilised society.

It is not our desire here particularly to pillory our law makers or the law enforces. They and we are equally prisoners, of the unjust society in which we live, inside or out side our jails. Once we realise this, and only, then. can we all together echo and commit ourselves to Chandran's closing exhortation in his letter - "Let not Smt. Snehalatha Reddy's death be a meaningless sacrifice. Let us make it an occasion to expose the uncivilised and violent character of our society and to begin determined efforts to make our society less violent and more civilised."

Rev. K. O. Abraham
**P. Lankesh**
Indian Express. Feb 25, 77

## APPENDIX III

## ಸ್ನೇಹಲತಾ ರೆಡ್ಡಿ - ಶ್ರದ್ಧಾಂಜಲಿ

ಸ್ನೇಹಲತಾರವರು 44 ನೇ ವಯಸ್ಸಿನಲ್ಲಿ ಮೃತರಾದರೆಂದರೆ ನಂಬುವುದು ಕಷ್ಟ. ಆಕೆಯ ಅಭಿಮಾನಿಗಳ ಸಂಖ್ಯೆ ಅಪಾರ. ಅವರೆಲ್ಲ ಬದುಕಿನ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವವರು. ಸಮಾಜವಾದೀ ನಾಯಕರು, ಬುದ್ಧಿ ಜೀವಿಗಳು, ದೇಶ ವಿದೇಶದ ರಂಗಭೂಮಿಯ ಕಲಾವಿದರು, ಲೇಖಕರು, ಇವರೆಲ್ಲರಿಗಿಂತ ಮಿಗಿಲಾಗಿ ಬದುಕಿನ ಉದ್ದೇಶ ಮತ್ತು ಅರ್ಥಗಳ ಅನ್ವೇಷಣೆಯಲ್ಲಿ ತೊಡಗಿದ್ದ ಹಲವಾರು ಯುವಕ ಯುವತಿಯರು. ಇವರನ್ನೆಲ್ಲ ಆಕೆಯ ಸರಳ, ಸುಂದರವಾದ ಡ್ರಾಯಿಂಗ್ ರೂಂನಲ್ಲಿ ಕಾಣಬಹುದಾಗಿತ್ತು. ಆಕೆಯದು ಅನ್ಯಾಯ, ಅಸಮಾನತೆಯನ್ನು ಸಹಿಸದ ದೇದೀಪ್ಯಮಾನವಾದ, ದೃಢವಾದ ವ್ಯಕ್ತಿತ್ವ. ಆಕೆ ಹಾಗಿರದಿದ್ದರೆ ವಿನಾಕಾರಣ ಜೈಲಿನಲ್ಲಿರಬೇಕಾಗಿರಲಿಲ್ಲ. ಎಂಟು ತಿಂಗಳ ಕಾಲ ತನ್ನ ಸೂಕ್ಷ್ಮ ಪ್ರವೃತ್ತಿಯ

ಆರೋಗ್ಯಕ್ಕೆ ಮಾರಕವಾದ ಆಕೆಯ ಜೈಲುವಾಸ ಯಾಕೆಂದು ತಿಳಿದಿರುವ ನಮಗೆಲ್ಲಾ ಆಕೆ ನಮ್ಮ ಕಾಲದ ಹುತಾತ್ಮಳು ಅನಿಸುತ್ತದೆ. ಆಕೆಯ ಬದುಕು ಮತ್ತು ಸಾವು, ದುಷ್ಟಶಕ್ತಿಯ ಸಮ್ಮುಖದಲ್ಲಿ ಮೂಕರಾಗಿಬಿಡುವ, ನಿರ್ಲಕ್ಷ್ಯ ತೋರಿಸುವ ಪಾಪಭರಿತ ವಾತಾವರಣದಲ್ಲಿ ಬದುಕುತ್ತಿದ್ದ ನಮ್ಮನ್ನೆಲ್ಲಾ ವಿಮೋಚನೆಗೊಳಿಸಿದವು.

ಡಿಸೆಂಬರ್ 25 ರಂದು ನಾನು ಆಕೆಯನ್ನು ಭೇಟಿಯಾದಾಗ ಆಕೆ ಜೈಲಿನಿಂದ ಪರೋಲ್ ಮೇಲೆ ಹೊರಗೆ ಬಂದಿದ್ದರು. ಆ ರೀತಿ ಬಂದಿರುವುದರ ಬಗ್ಗೆ ಆಕೆಗೆ ಸಮಾಧಾನವಿರಲಿಲ್ಲ. ಒಂದು ಅಪರಾಧ ಮಾಡಿದ ಭಾವನೆಯಿತ್ತು. ಆದರೆ ಪರೋಲ್‌ಗಾಗಿ ಪ್ರಯತ್ನಿಸಿದವರಿಗೆ ಆಕೆಯ ಜೈಲು ಜೀವನದ ಏಕಾಂತದ ದಿನಗಳು, ನೀಳವಾದ ರಾತ್ರಿಗಳು—ಭಯಾನಕತೆ, ಆತಂಕ ಮತ್ತು ತೀವ್ರ ಸ್ವರೂಪದ ಆಸ್ತಮಾದಿಂದ ಆಕೆ ನರಳುತ್ತಿದ್ದುದು ಚೆನ್ನಾಗಿ ಗೊತ್ತು. ಆದರೆ ಆಕೆಯನ್ನು ಇದಾವುದೂ ಬಾಧಿಸುತ್ತಿರಲಿಲ್ಲ. ಆಕೆ ಸದಾ ಚಿಂತಿಸುತ್ತಿದ್ದುದು ತಾನು ಜೈಲಿನಲ್ಲಿ ಬಿಟ್ಟು ಬಂದಿದ್ದ ಸ್ತ್ರೀ ಖೈದಿಗಳ ದುಃಸ್ಥಿತಿಯ ಬಗ್ಗೆ. (ಅವರಲ್ಲಿ ಬಹಳಷ್ಟು ಜನ ವೇಶ್ಯೆಯರು) ಅವರಿಗೆಲ್ಲಾ ಆಕೆ ಜೈಲಿನಲ್ಲಿ ಹಾಡು, ಆಟ ಪಾಠ ಹೇಳಿಕೊಡುತ್ತಿದ್ದರು. ಜೈಲು ಅಧಿಕಾರಿಗಳೊಡನೆ ಹೋರಾಡಿ ಅವರ ಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದ್ದರು. ಆಕೆಯ ಕ್ಷೇಮ ಸಮಾಚಾರದ ಬಗ್ಗೆ ಮಾತಾಡಲು ನನಗೆ ಅವಕಾಶವೇ ಕೊಡಲಿಲ್ಲ. ಅದರ ಬದಲು ಜೈಲಿನಲ್ಲಿದ್ದ ನತದೃಷ್ಟ ಮಹಿಳಾ ಖೈದಿಗಳ ಸುಧಾರಣೆಗೆ ನಾನೇನು ಮಾಡಬಹುದೆಂದು ಆಕೆ ಕೇಳಿದರು.

ಜೈಲಿನಲ್ಲಿ ಅಸಾಧಾರಣವಾದ ಮತ್ತು ಅಮಾನುಷ ರೀತಿಯ ನರಳುವಿಕೆಯಿಂದ ಕಂದಿ ಹೋಗಿದ್ದ ಆಕೆಯ ಕಳಕಳಿಯಿಂದ ಕೂಡಿದ ಸುಂದರವಾದ ಮುಖದಿಂದ ನನ್ನ ಕಣ್ತೆಗೆಯಲಾಗಲಿಲ್ಲ.

ಸ್ನೇಹಲತಾರವರನ್ನು ಕೊಂದಿದ್ದೇನು? ಸ್ತ್ರೀ ಖೈದಿಯೊಬ್ಬಳು, ಪುರುಷ ಖೈದಿಗಳನ್ನು ಭೇಟಿಯಾಗಕೂಡದೆಂಬ ಅರ್ಥಹೀನ ಕಾನೂನೇ?—ಒಂದು ಪಾಗಾರದಾಚೆಗೇ ಆಕೆಗೆ ಪ್ರಿಯರಾದ ರಾಜಕೀಯ ನಾಯಕರು ಮತ್ತು ಬುದ್ಧಿಜೀವಿ ಗೆಳೆಯರು (ಆಕೆಯಂತೆಯೇ ಮೀಸಾದನ್ವಯ ಬಂಧಿತರಾದವರು) ಇದ್ದರು. ಅಥವಾ ಯಾವ ಸೂಚನೆಯೂ ಇಲ್ಲದೇ ತನ್ನನ್ನು ನಿಸ್ಸಹಾಯಕ ಗಳಿಗೆಗಳಲ್ಲಿ ಆಸ್ತಮ ಕಾಡಿಸುತ್ತಿದ್ದುದರ ಬಗ್ಗೆ ಭೀತಿ ಮತ್ತು ಕಳವಳವೇ? ಅಥವಾ ಜೈಲಿನಲ್ಲಿದ್ದ ಇತರ ಸ್ತ್ರೀ ಖೈದಿಗಳನ್ನು ಅಮಾನುಷ ರೀತಿಯಲ್ಲಿ ನಡೆಸಿಕೊಳ್ಳುತ್ತಿದ್ದುದನ್ನು ಕಣ್ಣಾರೆ ಕಂಡ ಆಕೆಯ ಸಂವೇದನಾಶೀಲ ಹೃದಯದ ಆಘಾತವೇ? ಇಂಡಿಯಾದಲ್ಲಿ ಸ್ತ್ರೀಯರ ಮೇಲೆ

ಪುರುಷರು ನಡೆಸುವ ದಬ್ಬಾಳಿಕೆ, ಕ್ರೌರ್ಯದ ಬಗ್ಗೆ ಸದಾ ಸಿಡಿದೇಳುತ್ತಿದ್ದ ಸ್ನೇಹಲತಾ ಇದೇ ವಸ್ತುವನ್ನುಳ್ಳ 'ಸೀತಾ' ಎಂಬ ನಾಟಕವನ್ನು ಕೂಡ ಬರೆದಿದ್ದರು.

ನಾನಾಕೆಯನ್ನು ಇನ್ನೊಮ್ಮೆ ನೋಡಿದಾಗ ಎಲ್ಲವೂ ಕೌತುಕಮಯವಾಗಿ ಕಂಡವು. ಆಕೆ ಮೃತರಾಗಿದ್ದರು. ಆದರೆ ಆಕೆಯ ಮುಖದಲ್ಲಿ ಮೊದಲಿನ ಸೌಂದರ್ಯ ಮತ್ತು ಶಾಂತಿ ಎದ್ದು ಕಾಣುತ್ತಿತ್ತು. ಆಕೆಯ ದುಃಖ ಸಾವಿನಲ್ಲಿ ಕೊನೆಗೊಂಡಿತ್ತು. ಆಕೆಯ ಅಸಂಖ್ಯಾತ ಜನ ಸ್ನೇಹಿತರು ಅಲ್ಲಿದ್ದರು. ಸಮಾಜವಾದಿಗಳು, ಕಲಾವಿದರು, ಲೇಖಕರು, ಯುವಕ–ಯುವತಿಯರು, ಕಾರ್ಮಿಕರು ಮತ್ತು ಅವರ ನಾಯಕರು—ಒಟ್ಟಿನಲ್ಲಿ ಆದೊಂದು ಅರ್ಥಪೂರ್ಣ ಸಮಾವೇಶವಾಗಿತ್ತು. ಸಮಾಜವಾದೀ ನಾಯಕರನ್ನು ಮತ್ತು ಕಲಾವಿದರನ್ನು ಒಟ್ಟುಗೂಡಿಸುವುದು ಆಕೆಯ ಬಹಳ ಕಾಲದ ಪ್ರಯತ್ನವಾಗಿತ್ತು. ಆಕೆ ಮನೆಗೆ ಬಂದವರಿಗೆ ಊಟ ಹಾಕದೇ, ಇಲ್ಲವೇ ಒಂದು ಕಪ್ ಟೀಯಾದರೂ ಕೊಡದೇ ಕಳಿಸಿದ್ದಿಲ್ಲ. ಆ ದಿನವೂ ಕೂಡ ನಾವೆಲ್ಲ ಅಲ್ಲಿ ಊಟ ಮಾಡಿದೆವು. ಸ್ನೇಹಲತಾರ ಗಂಡ ಪಟ್ಟಾಭಿ, ತನ್ನ ಹೆಂಡತಿಯ ಬಯಕೆಯಂತೆ ಊಟ ಮಾಡಿಸಿದರು.

ಸ್ನೇಹ ಅತ್ಯುತ್ತಮ ನೃತ್ಯಗಾತಿ ಕೂಡ, ಭಾರತ ಮತ್ತು ಸ್ಪೇಯಿನ್‌ನಲ್ಲಿ ತರಬೇತಿ ಹೊಂದಿದ್ದರು. ನನಗೆ 'ಸಂಸ್ಕಾರ' ಕಾದಂಬರಿಯ ಕರ್ತೃವಾಗಿ, ಅದೇ ಕತೆಯನ್ನಾಧರಿಸಿ ಪಟ್ಟಾಭಿಯವರೇ ನಿರ್ದೇಶಿಸಿ ನಿರ್ಮಿಸಿದ, ಕನ್ನಡದಲ್ಲಿ ಹೊಸ ಅಲೆಯನ್ನೆಬ್ಬಿಸಿದ ಚಿತ್ರದ ನಾಯಕಿಯಾಗಿ ಸ್ನೇಹಲತಾ ಅಭಿನಯಿಸಿದ್ದು ನನಗೊಂದು ಮರೆಯಲಾಗದ ಅನುಭವ. ಪ್ರತಿಭಾವಂತ ತೆಲುಗು ಕವಿಯಾದ ತನ್ನ ಪತಿ ಪಟ್ಟಾಭಿಯ ಜೊತೆ ಸ್ನೇಹಲತಾರವರು ಈ ಚಿತ್ರದ ಯೋಜನೆ ಹಾಕಿದರು. ಚಿತ್ರ ಬಹಿಷ್ಕಾರವಾದಾಗ ಹೋರಾಡಿ, ಅಂತಿಮವಾಗಿ ರಾಷ್ಟ್ರದ ಅತ್ಯುನ್ನತ ಪ್ರಶಸ್ತಿ, ರಾಷ್ಟ್ರಪತಿ ಸ್ವರ್ಣಪದಕವನ್ನು ಮತ್ತು ಹಲವಾರು ಅಂತರರಾಷ್ಟ್ರೀಯ ಪ್ರಶಸ್ತಿಗಳನ್ನು ಗೆದ್ದರು.

ಸ್ನೇಹಲತಾ ಮದ್ರಾಸಿನ ರಂಗಭೂಮಿ ಚಟುವಟಿಕೆಗಳ ಜೀವಾಳವಾಗಿದ್ದರು. ಬೆಂಗಳೂರಿಗೆ ಬಂದು ನೆಲಸಿದ ನಂತರ ಇಲ್ಲಿನ ರಾಜಕೀಯ ಮತ್ತು ಕಲಾ ಚಟುವಟಿಕೆಗಳ ಕೇಂದ್ರವ್ಯಕ್ತಿಯಾದರು.

ಆಕೆ ಒಂದು ನಾಟಕ ನಿರ್ದೇಶಿಸಲಿ, ಅಥವಾ ಒಂದು ಪಾತ್ರದಲ್ಲಿ ಅಭಿನಯಿಸಲಿ, ಅಥವಾ ಒಂದು ಕೊಠಡಿಯ ಒಳಾಲಂಕಾರ ಮಾಡಲಿ, ಅಥವಾ ಮನೆಗೆ ಬಂದ ಅತಿಥಿಗಳನ್ನು ಸತ್ಕರಿಸುವದಿರಲಿ–ಎಲ್ಲವುದರಲ್ಲೂ ಕ್ರಿಯಾಶೀಲತೆ ಎದ್ದು

ಕಾಣುತ್ತಿತ್ತು. ತನ್ನ ಎದುರಾಳಿಯ ಮನ ನೋಯಿಸದೇ ಆಕೆ ಬಿಚ್ಚು ಮನಸ್ಸಿನಿಂದ ವಿಮರ್ಶಾತ್ಮಕವಾಗಿ ತನ್ನ ಅಭಿಪ್ರಾಯಗಳನ್ನು ಕೊಡಬಲ್ಲವರಾಗಿದ್ದರು. ಆಕೆಯ ದಿನ ನಿತ್ಯದ ಬದುಕು ಹಲವಾರು 'ನೆನಪಿಸಿಕೊಳ್ಳಲಾಗದ ಪ್ರೀತಿ ದಯೆಯ ಕಿರು ಕಾರ್ಯ' ಗಳಿಂದ ತುಂಬಿದ್ದವು. ರಾಜಕೀಯ ಮತ್ತು ಕಲೆಯ ಬಗ್ಗೆ ಉಪಯೋಗಿಸುತ್ತಿದ್ದಷ್ಟೇ ಕಾಲವನ್ನು ತನ್ನ ಯುವ ಸ್ನೇಹಿತರ ವೈಯಕ್ತಿಕ ಸಮಸ್ಯೆಗಳನ್ನು ಬಗೆಹರಿಸುವುದಕ್ಕೂ ಕಳೆಯುತ್ತಿದ್ದರು.

ಸ್ನೇಹಲತಾರವರು, ರಾಷ್ಟ್ರದ ಕೆಲವೇ ಕೆಲವು ಕ್ರಿಯಾಶೀಲ ವಿಚಾರವಂತರಲ್ಲಿ ಒಬ್ಬರಾದ ಡಾ॥ ರಾಮ ಮನೋಹರ ಲೋಹಿಯಾ ಅವರ ಆಪ್ತ ಮಿತ್ರರೂ ಮತ್ತು ಅನುಯಾಯಿಗಳೂ ಆಗಿದ್ದರು. ಭಾರತದಲ್ಲಿ ಕೆಲವು ರಾಜಕೀಯ ನಾಯಕರಿಗಾಗಿ ಜನರು ಪ್ರಾಣತ್ಯಾಗಮಾಡಲು ಸಿದ್ಧರಿದ್ದಾರೆ. ಡಾ॥ ರಾಮಮನೋಹರ ಲೋಹಿಯಾ ರವರು ಅಂಥ ಕೆಲವೇ ನಾಯಕರಲ್ಲಿ ಒಬ್ಬರೆಂದು ಅಭಿಪ್ರಾಯವಿದೆ. ಸ್ನೇಹ ರವರು ಲೋಹಿಯಾರವರಿಗೆ ಪ್ರಿಯವಾದ ಕಾರಣಗಳಿಗಾಗಿ ತಮ್ಮ ಪ್ರಾಣಾರ್ಪಣೆ ಮಾಡಿದರು. ಸ್ನೇಹಲತಾರವರು ತಮ್ಮ ಮಗಳು ನಂದನಾ (ಆಕೆಯೂ ತಾಯಿಯಂತೆ ಸುಂದರಿ ಹಾಗೂ ಪ್ರತಿಭಾವಂತೆ) ಮಗ ಕೊನಾರಕ್ (ಭರವಸೆ ಹುಟ್ಟಿಸುವ ಸಂಗೀತಗಾರ) ಮತ್ತು ಪತಿ ಪಟ್ಟಾಭಿ (ನನಗೆ ಗೊತ್ತಿರುವ ಅತ್ಯಂತ ಸಂಭಾವಿತ ವ್ಯಕ್ತಿಗಳಲ್ಲೊಬ್ಬರು) ಯವರನ್ನು ಅಗಲಿ ಹೋಗಿದ್ದಾರೆ.

ಇವರಲ್ಲದೇ ಆಕೆಯ ಅಸಂಖ್ಯಾತ ಗೆಳೆಯರನ್ನು (ಅವರಲ್ಲಿ ಕೆಲವರಿನ್ನೂ ಜೈಲಿನಲ್ಲಿದ್ದಾರೆ) ಉತ್ತೇಜಿಸುವ ಮಹದೋದ್ದೇಶವನ್ನು ತಮ್ಮ ಹಿಂದೆ ಬಿಟ್ಟು ಹೋಗಿದ್ದಾರೆ.

● **ಯು. ಆರ್. ಅನಂತಮೂರ್ತಿ**

ಇಂಡಿಯನ್ ಎಕ್ಸ್‌ಪ್ರೆಸ್
ಫೆಬ್ರವರಿ. 12,77

